## ನನಗೆ ಪ್ರಿಂಟಿಂಗ ಮಾಡಿಸಲಿಕ್ಕೆ ಧನ ಸಹಾಯ ಮಾಡಿದ ಮಹನೀಯರ ಹೆಸರುಗಳು.

ನಿಂಗಪ್ಪ ಫಕೀರಪ್ಪ ಹೆಳವಳ್ಳಿ ಸಾ॥ ಬಂಕಾಪೂರ
ಸೋಮಪ್ಪ ನೀಲಪ್ಪ ತಳ್ಳೊಳ್ಳಿ ,,
ಕರಿಯಪ್ಪ ರಾಮಣ್ಣ ಕಟಿಗಿ (ಕಟ್ಟೀಮನಿ) ,,
ಸಂಗಪ್ಪ ನಿಂಗಪ್ಪ ಬಳ್ಳಾರಿ (ವೀರಶೈವ) ,,
ಫಕೀರಪ್ಪ ಹನಮಂತಪ್ಪ ಬೆಳಗಾಲ ಸಾ॥ ಲಕ್ಕಿಕೊಪ್ಪ
ಶಿವಲಿಂಗಪ್ಪ ಫಕೀರಪ್ಪ ಕರೂವಿ ಸಾ॥ ಎಲವಿಗಿ

ಮೇಲ್ಕಾಣಿಸಿದ ಮಹನೀಯರು ಧನ ಸಹಾಯ ಮಾಡಿ ಪ್ರೋತ್ಸಾಹ ಕೊಟ್ಟದ್ದಕ್ಕಾಗಿ ಅವರ ಆಭಾರವನ್ನು ಮನ್ನಿಸುವೆನು.

ಹೇಮರಡ್ಡಿ ಶಾಖಾನ್ವಿತರಾದ ನರಸಪ್ಪ ಗೋಕಾವಿ ಸಾ॥ ಹುಲ್ಲೂರ ಇವರು ತಮ್ಮ ಉದಾರ ಹಸ್ತದಿಂದ ಈ ಮೊದಲೇ ಸನ್ ೧೯೫೩ ರಲ್ಲಿ ಹಾಲುಮತ ಪುರಾಣವನ್ನು ಪ್ರಿಂಟಿಂಗ ಮಾಡಿಸಿದ ಕಾಲಕ್ಕೆ ಉತ್ತೇಜನ ಕೊಟ್ಟು ತಮ್ಮ ಉದಾರ ಹಸ್ತದಿಂದ ಧನ ಸಹಾಯ ಮಾಡಿದಂಥ ಈ ಮಹನೀಯರಿಗೆ ಈವತ್ತಿಗೂ ನಾನು ಋಣಿಯಾಗಿದ್ದೇನೆ. ದೇವರು ಅವರಿಗೆ ಆಯುರಾರೋಗ್ಯ ಕೊಡಲೆಂದು ಹಾರೈಸುತ್ತೇನೆ

# ಪ್ರಸ್ತಾವನೆ.

ಲೇಖಕನ ವಿನಂತಿ ಪುರಾತನ ಕಾಲದಿಂದ ಅತಿ ಉಚ್ಚ ಪಟ್ಟಕ್ಕೇರಿದ ನಮ್ಮ ಕುರುಬರ (ಹಾಲುಮತ) ಮತ ಜನಾಂಗವು ಹೀನಾವಸ್ಥೆಯನ್ನು ಹೊಂದಿದ್ದು ನೋಡಿ ಮನಸ್ಸಿಗೆ ಕೆಡಕೆನಿಸಿತು. ಅದಕ್ಕೆ ೧೯೧೦ ನೇ ಇಸ್ವಿಯಲ್ಲಿ ತಾಳೆವಾಲೆಗಳಲ್ಲಿದ್ದ ಲೇಖನವನ್ನು ಬರೆದು ಹಾಲುಮತ ಪುರಾಣ ಪ್ರಿಂಟು ಮಾಡಿಸಿ ಲಕ್ಷ್ಮೇಶ್ವರ ಹಾಲುಮತ ಧರ್ಮೋತ್ತೇಜ ಮಹಾಸಭೆ ೧೯೧೦ ನೇ ಇಸ್ವಿ ಅಕ್ಟೋಬರ ತಿಂಗಳ ೨೩. ೨೪. ೨೫ ನೇ ದಿವಸಗಳಲ್ಲಿ ಪ್ರಕಟವಾಗಿ ಹಂಚಿದೆನು. ಮತ್ತು ಅದೇ ಪುರಾಣವನ್ನು ಕೆಲವು ಜನರು ಅತಿ ಆಗ್ರಹಪಟ್ಟು ಕೇಳಿದ್ದಕ್ಕಾಗಿ ಪುನಃ ೧೯೩೭ ನೇ ಇಸ್ವಿಯಲ್ಲಿ ಸುಧಾರಿಸಿ ಪ್ರಿಂಟು ಮಾಡಿಸಿದೆನು. ತುಟ್ಟಿಕಾಲದಲ್ಲಿ ಅದರ ಖರ್ಚು ಬಹಳ ಬಂದ ಕಾರಣ ತೊಂದರೆ ಆಯಿತು. ನಮ್ಮಲ್ಲಿ ವಿದ್ವಾಂಸರೂ ಮಠಾಭಿಮಾನಿಗಳೂ ಇಲ್ಲದ ಕಾರಣ ಪ್ರತಿಗಳು ಹಾಗೇ ಉಳಿದಿವೆ. ಇಂಥ ಪ್ರಸಂಗದಲ್ಲಿ ನಮ್ಮ ಕುಲದೇವನಾದ ಶ್ರೀ ಬೀರೇಶ್ವರನ ಚರಿತ್ರೆ ಬರೆದು ನಾನು ಮತಸೇವೆ ಮಾಡುತ್ತೇನೆಂಬ ಹೇಳುವದು ದೊಡ್ಡಸ್ತನವಲ್ಲ. ಶ್ರೀ ಬೀರೇಶ್ವರನೇ ನನ್ನ ಬಡತನ ಬಾಳ್ವೆಯಲ್ಲಿ ಪ್ರೇರಣೆ ಆಶೀರ್ವಾದ ಸಂಪೂರ್ಣ ಮಾಡಿದ ಕಾರಣ ನನ್ನ ವಯಸ್ಸು ೭೬ ಇದ್ದು ಮುಪ್ಪಾವಸ್ಥೆಯಲ್ಲೇ ಆ ದಯಾಘನನ ಕರುಣದಿಂದ ಕೆಲವು ಆಧಾರಗಳನ್ನು ಹುಡುಕಿ ಬರೆದಿದ್ದೇನೆ. ಇದರಲ್ಲಿ ಕೆಲವು ದೋಷಗಳಿದ್ದರೂ ಮನ್ನಿಸಿ ಇದಕ್ಕೂ ಹೆಚ್ಚಿನ ಆಧಾರಗಳು ಇದ್ದರೆ ತಿಳಿಸಿ ಮತೋದ್ಧಾರ ಮಾಡಬೇಕೆಂದು ಬೇಡಿಕೊಳ್ಳುವೆನು. ಅತಿ ಪುರಾತನದಿಂದಲೂ ಪಶು ಪಾಲನೆ ಮಾಡುವ ಆರ್ಯರ ಸನಾತನ ಧರ್ಮವೇ ಇದು ಎಂದು ಋಗ್ವೇದ. ಯಜುರ್ವೇದಗಳಲ್ಲಿ ಕೂಡಾ ವಿವರಿಸಲ್ಪಟ್ಟಿದೆ. ಮತ್ತು ಜ್ಯೋತಿಷ್ಯ ಶಾಸ್ತ್ರದಲ್ಲಿ ರಾಶಿಗಳಲ್ಲಿ ಪ್ರಥಮಸ್ಥಾನ ಕೊಟ್ಟಿದ್ದು ನೋಡಿದರೆ ಪುರಾತನ ಪಶುವೇ ಮೇಷವೆಂಬುವದರಿಂದ ಇದರ ಪಾಲಕರೇ ಕುರುಬರೆಂದು ಗೋಚರವಾಗುವದು. ಕಾರಬ ಋಷಿಯಿಂದ ಎಷ್ಟೋ ಜನರು ಸತ್ಯಶೀಲರೂ, ತಪಸ್ವಿಗಳೂ. ರಾಜರೂ ದಾನಶೂರರಾಗಿ

ತಮ್ಮ ಹೆಸರಿನ ಗೋತ್ರಗಳನ್ನು ಪ್ರಸಿದ್ಧ ಮಾಡಿರುವರು. ಅವುಗಳನ್ನು ಈ ಚರಿತ್ರೆಯ ಕಡೆಯಲ್ಲಿ ಕೊಟ್ಟಿದೆ. ಈ ಮತದವರು ಹಿಂಸಾ ಬಿಟ್ಟು ವಿದ್ಯಾವಂತರೂ ಆಚ್ಯಾರವಂತರೂ ಆಗುವಂತೆ ಶ್ರೀ ಬೀರೇಶನು ದಯಪಾಲಿಸಲಿ ಎಂದು ಅನನ್ಯ ಭಾವದಿಂದ ಬೇಡಿಕೊಳ್ಳುವೆನು. ಈ ಗ್ರಂಥವನ್ನು ಕನ್ನಡದಿಂದ ಮರಾಠಿ ಭಾಷಾಂತರ ಮಾಡಿ ಕಳಿಸಬೇಕೆಂದು ಪಟ್ಟಣ ಕೋಡೇಲಿಯಾ ಹಾಲುಮತ ಕುರುಬ ಜನಾಂಗದವರು ಅತಿ ಆಗ್ರಹ ಮಾಡಿದ್ದರಿಂದ ಬಂಕಾಪೂರದಲ್ಲಿರುವ ರಾ|| ರಾ|| ಶಿದ್ದಪ್ಪಾ ಹುಲಗೂರ ಇವರು ಈ ಗ್ರಂಥ ಬರೆಯಲಿಕ್ಕೆ ಸಹಾಯ ಮಾಡಿದ್ದರಿಂದ ಇವರ ಅಭಾರ ಮನ್ನಿಸುವೆನು.

ಮತಸೇವಕ,

**ಬಸವಣ್ಣೆಪ್ಪಾ ನೀಲಪ್ಪಾ ಹಳವಳ್ಳಿ**

**ಬಂಕಾಪೂರ.**

॥ ಶ್ರೀ ಗಜಾನನ ಪ್ರಸನ್ನ ॥

# ಶ್ರೀ ಬೀರೇಶ್ವರ ಚರಿತ್ರ.

(ಪ್ರಮಾಣ ಸ್ಕಂದ ಪುರಾಣ ಅಗಸ್ತ್ಯ ಸಂಹಿತೆಯ ೬೬ ನೇ ಅಧ್ಯಾಯ ೧೦ ನೇ ಶ್ಲೋಕ.)

॥ ಶ್ಲೋಕ ॥

ಪ್ರಾಗ ಕೈಲಾಸ ಶಿಖರೇ । ದೈತ್ಯೋ ಭೂತ್ಕ್ರೂರ ರಾಕ್ಷಸಃ ।
ಪಾರ್ವತೀಂಚ ತಪಸ್ತಪ್ತ್ವಾ । ವರಂಲೇ ಭೇಲಿ ದಾರುಣಂ ।
ತೇನ ಮತ್ತೋ ಜಗತ್ಸರ್ವ । ಬಾಧಯಾ ಮಾಸ ರಾಕ್ಷಸಃ ॥
ತದ್ಬಾಧಾ ಶಮನಾರ್ಥಂ ವೈ । ವೀರಭದ್ರೋ ಶಿವಾಕೃತಿಃ ।
ವೀರೇಶ್ವರ ಯಿತಿ ಖ್ಯಾತಃ । ಕೌರಜೋ ಭೂತ್ಮಹಾಶಯಃ ।
ತಮೇವ ದೇವತಾಂ ಕೃತ್ವಾ । ಕೌರಬಾ ಭಕ್ತಿ ತತ್ಪರಾಃ ।
ಅರ್ಚಯಂತಿ ಮಹತ್ಮಾನಂ । ಬೀರೇಶ್ವರ ಮಹಾತ್ಮನಂ ॥ ೨೧ ॥

## ಭಿಲ್ಲಾಸುರನ ಜನನ.

ವಿಭಾಗ ಗೋತ್ರದಲ್ಲಿ ಮಂದಾರನೆಂಬ ಮಹಾಮಹಿಮನಿಂದ ಕೈಲಾಸ ಶಿಖರದಲ್ಲಿ ಭಿಲ್ಲಾಸುರ ದೈತ್ಯನು ಹುಟ್ಟಿದನು. ಇವನು ಬಲ್ಲಿದನಾಗಿ ತ್ರಿಜಗವನ್ನು ತಾನೇ ಆಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಗಿರಿಜಾದೇವಿಯನ್ನು ಕುರಿತು ಅನ್ನ ನೀರುಗಳಿಲ್ಲದೆ ಏಕನಿಷ್ಠೆಯಿಂದ ತಪಸ್ಸು ಮಾಡಿದನು. ಆಗ ಪಾರ್ವತಾದೇವಿ ಆವನ ತಪಸ್ಸಿಗೆ ಮೆಚ್ಚಿ ಏನು ವರವ ಬೇಡುತ್ತೀ ಬೇಡು ಎಂದು ಅನ್ನಲು ಆಗ ಅಸುರನು ದೇವೀ ನನಗೆ ಸುರರು, ನರರು, ರಾಕ್ಷಸರು ಇವರಿಂದ ಮರಣವಾಗಬಾರದು. ಎಂದೂ ಪರಮೇಶ್ವರನ ಪ್ರತಿಬಿಂಬದಿಂದಲೇ ನನಗೆ ಮರಣವಾಗಬೇಕು ಎಂದೂ ಬೇಡಿಕೊಂಡನು. ಅದಕ್ಕೆ ಆ ದೇವಿಯು ಹಾಗೇ ಆಗಲೆಂದು ವರವನ್ನು ಕೊಟ್ಟು ಮಾಯವಾದಳು.

## ಭಿಲ್ಲಾಸುರ ರಾಕ್ಷಸನ ದಿಗ್ವಿಜಯ.

ದೇವಿಯ ವರದಿಂದ ಮದೋನ್ಮತ್ತನಾಗಿ ಅಟ್ಟಹಾಸದಿಂದ ಭಿಲ್ಲಾಸುರನು ಅಲೆದಾಡುತ್ತ ತನಗೆ ಸರಿಯಾದ ವೀರರು ಯಾರು ಇರುವರೆಂದು ಹುಡುಕ ಹತ್ತಿದನು. ಆದರೆ ಅವನಿಗೆ ಅಂಥ ವೀರರು ಒಬ್ಬರೂ ಸಿಗದಾದರು. ಆಗ ಸೂರ್ಯ, ಚಂದ್ರ, ವಾಯು, ವರುಣ, ಕುಬೇರ, ಕಾಲ ಯಮ, ದಿಕ್ಪಾಲಕರು ಮೊದಲಾದ ಯಾವತ್ತೂ ಅಧಿಕಾರಿಗಳನ್ನು ಕಿತ್ತೊಗೆದು ದೇವ, ಯಕ್ಷ, ಗಂಧರ್ವ, ನರ, ಕಿನ್ನರ ಮೊದಲಾದವರನ್ನು ತನ್ನ ಬಾಹುಬಲದಿಂದ ಗೆದ್ದು ಅಮರನಾಗಿ ಮೆರೆಯಹತ್ತಿದನು. ಉಳಿದ ರಾಕ್ಷಸರು ಧರ್ಮವು ನಿರ್ಮೂಲವಾಗುವಂತೆ ವೇದೋಕ್ತ ವ್ಯವಹಾರಗಳನ್ನು ಕೆಡಿಸುತ್ತ ಸಾಗಿದರು. ಆಕಳುಗಳು ಬ್ರಾಹ್ಮಣರು ಇರುವಂಥ ಊರುಗಳನ್ನೂ ಪಟ್ಟಣಗಳನ್ನೂ ಹಾಳು ಮಾಡಹತ್ತಿದರು. ಸದಾಚಾರಕ್ಕೆ ಎಲ್ಲಿಯೂ ಆಸ್ಪದವು ದೊರೆಯದಾಯಿತು ದೇವತೆಗಳು, ಬ್ರಾಹ್ಮಣರು, ಗುರುಗಳು ಇವರನ್ನು ಯಾರೂ ಮನ್ನಿಸದಾದರು ಹರಿ-ಹರರಲ್ಲಿ ಭಕ್ತಿ, ಯಜ್ಞ, ಜಪ, ದಾನ ಇವು ಎಲ್ಲಿಯೂ ಉಳಿಯಲಿಲ್ಲ, ವೇದಗಳು, ಪುರಾಣಗಳು ಕನಸಿನಲ್ಲಿಯೂ ಕಿವಿಗೆ ಬೀಳದಾದವು. ಜಗತ್ತಿನ ತುಂಬ ಭ್ರಷ್ಟಾಚಾರವಾಗಿ ಧರ್ಮದ ಹೆಸರು ಉಳಿಯದಂತಾಯಿತು. ದುಷ್ಟ ರಾಕ್ಷಸರ ಭಯಂಕರ ಅನೀತಿಯ ಕೃತಿಗಳನ್ನು ವರ್ಣಿಸುವದು ಶಕ್ಯವಿಲ್ಲ. ಹಿಂಸೆಯು ಅತ್ಯಂತ ಪ್ರಿಯವಾಗಿದ್ದದರಿಂದ ಪಾಪ ಕೃತಿಗಳಿಗೆ ಮಿತಿ ಉಳಿಯಲಿಲ್ಲ. ಈ ಪ್ರಕಾರ ಭಿಲ್ಲಾಸುರನು ಸುರಲೋಕದಲ್ಲಿ ದಾಳಿ ಇಡಲು ಅವನ ಶೌರ್ಯಕ್ಕೆ ಯಾರೂ ಎದುರು ನಿಲ್ಲದೆ, ಯಾವತ್ತೂ ದೇವತೆಗಳು ಇಂದ್ರ, ಅಗ್ನಿ, ಯಮ, ಹರಿ, ಬ್ರಹ್ಮಾದಿಗಳು ಹೆದರಿ ಶ್ರೀ ಶಂಕರನಿಗೆ ಮೊರೆ ಇಡಲು ಬೇಡಿಕೊಂಡರು.

## ವೀರೇಶ್ವರನ ಜನನ.

ಶ್ರೀ ಶಂಕರನು ಎಲ್ಲ ಸಂಗತಿ ವಿಚಾರಿಸಿ ಕೋಪಾರೂಢನಾಗಿ ವೀರಭದ್ರನ ಮುಖವ ನೋಡಿದನು. ಶಿವನ ಕೋಪ ತೇಜಾಂಶವು ವೀರೇಶನ ರೂಪಾಗಿ ಈಶನ ಮುಂದೆ ನಿಂತನು. ಈಶನು ಆವೇಶದಿಂದ ವೀರೇಶನಿಗೆ ಭಿಲ್ಲಾಸುರ ರಾಕ್ಷಸನನ್ನು ಕೊಂದು ಬೀರೇಶ್ವರನಾಗೆಂದು ವರವಿತ್ತನು. ಆಗ ವೀರೇಶನು

ತನ್ನ ಸತಿಯಾದ ಭದ್ರಕಾಳಿಗೆ ನೀನು ಕವಳೇಶ್ವರಿ ಎಂಬ ನಾಮವನ್ನು ಧರಿಸಿ ಕೊಂಡು ನನ್ನ ಸಂಗಡ ಬರಬೇಕೆಂದು ಆಜ್ಞೆ ಮಾಡಿದನು. ಆಗ ಭದ್ರಕಾಳಿಯು ಪತಿಯಾಜ್ಞೆಯಂತೆ ಕವಳೇಶ್ವರಿ ಎಂಬ ನಾಮವನ್ನು ಧರಿಸಿದಳು. ಆಗ ವೀರೇಶ ಕವಳೇಶ್ವರಿಯವರು ಕೋಪಾರೂಢರಾಗಿ ಭಿಲ್ಲಾಸುರ ರಾಕ್ಷಸನನ್ನು ಸಂಹಾರ ಮಾಡಲಿಕ್ಕೆ ಹೊರಟರು.

## ಭಿಲ್ಲಾಸುರನ ಮರಣ.

ಭೂಲೋಕದಲ್ಲಿ ಭಿಲ್ಲಾಸುರನನ್ನು ಹುಡಕುತ್ತಾ ಅವನಿದ್ದ ಸ್ಥಾನಕ್ಕೆ ಬಂದು ಎಲೈ ದೈತ್ಯನೇ ನಿನ್ನ ಗರ್ವವನ್ನು ಮುರಿದು ನಾಶ ಮಾಡಲಿಕ್ಕೆ ಈಶನ ಮಗನಾದ ವೀರೇಶನೇ ಬಂದಿರುವೆನು. ಯುದ್ಧಕ್ಕೆ ಬಂದು ನಿಲ್ಲು ಎಂದು ಘರ್ಜಿಸಿದನು. ಆಗ ಭಿಲ್ಲಾಸುರನು ವೀರೇಶನನ್ನು ಧಿಕ್ಕಾರ ಮಾಡಿ ಎಲೋ ಮೂರ್ಖನಾದ ನಿನ್ನನ್ನು ನನ್ನ ಬಾಹು ಬಲದಿಂದ ಹೊಡೆದು ಪಲಾಯನ ಮಾಡಿಸುವೆನು. ನಿನ್ನ ಬಿಂಕದ ಮಾತನ್ನು ಬಿಟ್ಟು ಬಿಡು ಎಂದು ಹೀಯಾಳಿಸಿದನು. ಆಗ ವೀರೇಶನು ಎಲೈ ಪಿಶಾಚಿಯೇ ಕೇಳು ನಾನು ಪರಮೇಶ್ವರನ ಮಗನಾದ ವೀರಭದ್ರನಿರುವೆನು ಈ ವೀರನ ಮುಂದೆ ನಿನ್ನ ಡಂಭಾಚಾರವನ್ನು ಕೊಚ್ಚಬೇಡೆಲೋ ನೀಚ ದಾನವಾ ಅನ್ನಲು ಅದನ್ನು ಕೇಳಿ ಭಿಲ್ಲಾಸುರನು ಎಲೋ ಮಂದಮತಿಯಾದ ವೀರನೇ ನಿನಗೆ ಬಹಳ ಗರ್ವ ಬಂದಂತೆ ತೋರುತ್ತದೆ ಆದರೆ ಈ ಸಮರದಲ್ಲಿ ನಿನ್ನ ಶೂರತನ ನೋಡಿ ಬಿಡುತ್ತೇನೆ. ರಣಕ್ಕೆ ಬರುವಂಥವನಾಗು ಅನ್ನಲು ಅದಕ್ಕೆ ವೀರೇಶನು ಎಲೈ ಪಿಶಾಚಿ ರಕ್ಕಸನೇ ನೀನು ವಿಧಿಯ ವರವನ್ನು ಪಡೆದು ಅಮರನಾಗಿರುವೆನೆಂದು ಮೆರೆಯುತ್ತಾ ಸೊಕ್ಕಿದ ನಿನ್ನ ಗರ್ವಭಂಗ ಮಾಡದೇ ಬಿಡುವವನಲ್ಲ ಮೂಢನೇ ಬರುವಂಥವನಾಗು ಈ ನಿನ್ನ ಅಗಣಿತವಾದ ಸೊಕ್ಕನ್ನು ನಾಶ ಮಾಡಲಿಕ್ಕೆ ನೀನಿದ್ದಲ್ಲಿಗೇ ಬಂದಿರುವೆನು ಅನ್ನಲು ಆಗ ದೈತ್ಯನು ವೀರೇಶನ ನುಡಿ ಕೇಳಿ ಎಲೋ ಹಬ್ಬುಲಿಯಂತೆ ಆರ್ಭಟಿಸುವ ನಿನ್ನ ಕೊಬ್ಬನ್ನು ಮುರಿದು ನನ್ನ ಭೂತಗಣಕ್ಕೆ ಹಬ್ಬ ಮಾಡಿಸದೇ ದೈತ್ಯ ಕುಲಮಣಿಯಾದ ಭಿಲ್ಲಾಸುರನು ಬಿಡುವವನಲ್ಲ. ತಿಳಿಯಿತೇ ಎನ್ನಲು ಅವನು ಆಡಿದ ನುಡಿಗಳನ್ನು ಕೇಳಿ ಎಲೋ ಅಧಮಾ

ನಿನ್ನ ಹೊಟ್ಟೆಯನ್ನು ಸೀಳಿ ನಿಟ್ಟೆಲವುಗಳನ್ನು ಕುಟ್ಟಿ ಕುಟ್ಟಿ ಪಿಟ್ಟು ಮಾಡಿ ನರಿ ನಾಯಿಗಳಿಗೆ ಹಬ್ಬ ಮಾಡುವೆನು. ಯುದ್ಧಕ್ಕೆ ಬಾ ಎಂದು ಕರೆಯಲು ಈ ಪ್ರಕಾರ ಉಭಯತರು ಬೊಬ್ಬಿರಿದು ಯುದ್ಧ ಮಾಡುವ ಸಮಯದಲ್ಲಿ ಒಬ್ಬರು ಬಿಡುವ ಬಾಣಗಳನ್ನು ಮತ್ತೊಬ್ಬರು ಮಧ್ಯದಲ್ಲೇ ಖಂಡಿಸಿ ಅಸ್ತ್ರಗಳನ್ನು ಹಾರಿಸಿ ಬಿಡುತ್ತಿದ್ದರು. ಅಸ್ತ್ರಗಳನ್ನು ಬಿಡುವ ಅಬ್ಬರವನ್ನು ನೋಡಿ ಜಗತ್ತೇ ನಡುಗಿತು. ಆಗ ದೈತ್ಯನ ಪರಾಕ್ರಮ ನೋಡಿ ವೀರಭದ್ರನು ರೌದ್ರಾಕಾರ ತಾಳಿ ಘುಡಿ ಘುಡಿಸುತ್ತ ಕಣ್ಣು ಕೆಂಪಗೆ ಮಾಡಿ ಕೋಪಾರೂಢನಾಗಿ ಎಲೋ ಭಿಲ್ಲಾಸುರನೇ ಈಗ ನಾನು ಬಿಡುವ ರುದ್ರಾಸ್ತ್ರದಿಂದ ನಿನ್ನ ಪ್ರಾಣ ತೆಗೆಯುವೆನೆಂದು ಬೊಬ್ಬಿರಿದು ಬಿಟ್ಟನು. ಅದರಿಂದ ರುದ್ರಾಸ್ತ್ರದ ಪೆಟ್ಟಿನಿಂದ ಮರಣಹೊಂದಿದನು. ಆ ದುಷ್ಟನನ್ನು ಸಂಹರಿಸಿ ಶಿಷ್ಟರನ್ನು ಪಾಲಿಸಿದನು. ಇದನ್ನು ನೋಡಿ ದೇವತೆಗಳೆಲ್ಲರೂ ಸಂತೋಷಭರಿತರಾಗಿ ಹೂಮಳೆಗರೆದರು. ದುಂದುಭಿಗಳು ಮೊಳಗಿದವು. ಆ ಸಮಯದಲ್ಲಿ ಕವಳೇಶ್ವರಿಯು ಕಾಂತನನ್ನು ಶಾಂತಗೊಳಿಸಿದಳು. ಆ ಮೇಲೆ ಉಭಯತರು ದೇವಲೋಕಕ್ಕೆ ತೆರಳಿದರು. ಅಲ್ಲಿ ಪರಮೇಶ್ವರನ ಮುಂದೆ ತಾನು ಲೋಕಕಂಟಕನಾದ ಬಿಲ್ಲಾಸುರನನ್ನು ತಮ್ಮ ಅಪ್ಪಣೆಯಂತೆ ಸಂಹರಿಸಿದೆನು ಎಂದು ಹೇಳಲು ಆಗ ಆನಂದಭರಿತನಾಗಿ ಶಿವನು ಮಗನನ್ನು ಅಪ್ಪಿಕೊಂಡು ಎಲೈ ಮಗನೇ ನಿನ್ನ ಕೀರ್ತಿ ದಿಗಂತರ ಉಳಿಯುವಂತೆ ಭಿಲ್ಲಾಸುರನನ್ನು ಕೊಂದ ಕಾರಣ ಬೀರೇಶ್ವರನೆಂಬ ನಾಮಧಾರಣ ಮಾಡಿ ಭೂಲೋಕದಲ್ಲಿ ಪಶುಪಾಲಕರೂ, ಸತ್ಯಶೀಲರೂ, ದೃಢಭಕ್ತಿಯುಳ್ಳವರೂ ಆದ ಆರ್ಯ ಜನಾಂಗ ಹಾಲುಮತ ಕುರುಬರಿಗೆ ಕುಲದೇವನಾಗಿ ಮೆರೆದು ಬರಬೇಕೆಂದು ಹೇಳಿ ಅಪ್ಪಣೆ ಮಾಡಿದನು. ಮತ್ತು ಕವಳೇಶ್ವರಿದೇವಿಗೆ ನೀನು ವೈಕುಂಠಪತಿಯಾದ ಶ್ರೀಹರಿಗೆ ಮಗಳಾಗಿ ಕನ್ನೆಕೋಮಾಲಿ ಎಂಬ ನಾಮದಿಂದ ಬೀರೇಶನ ಮಡದಿ ಆಗೆಂದು ಅಪ್ಪಣೆ ಮಾಡಿದನು. ಈ ಅಪ್ಪಣೆ ಕೇಳಿಕೊಂಡು ಬೀರೇಶನು ಹೇ ತಂದೆಯಾದ ಶಂಕರನೇ ಆ ಹಾಲುಮತ ಕುರುಬರೆಂದರೆ ಯಾರು? ಅವರ ಚರಿತ್ರೆಯನ್ನು ವಿವರಿಸಬೇಕೆಂದು ಬೇಡಿಕೊಂಡನು.

# ಹಾಲುಮತ ಕುರುಬರ ಉತ್ಪತ್ತಿ.

ಅದಕ್ಕೆ ಶಿವನು ಹೇಳಲು ಆರಂಭ ಮಾಡಿದನು. ಎಲೈ ಮಗನೇ ಚಿತ್ತವಿಟ್ಟು ಕೇಳು ಶ್ರೀಮತ್ ಸೃಷ್ಟಿಯ ಸಮಸ್ತ ವರ್ಣಂಗಳು ಇಲ್ಲವೆಂದಾಗ್ಗೆ ನಾನೇ ರಚನೆ ಮಾಡಿದರೆ ಸೇವ ಸೇವಕತ್ವ ಒಂಟಿತ್ವವಿಲ್ಲವೇ ಹೋಗುವದೆಂದು ಶುದ್ಧ ಕಂಜನಾದ ಬ್ರಹ್ಮನನ್ನು ಉದ್ಭವಿಸಿದೆನು ಆಗ ನನ್ನ ಅಪ್ಪಣೆಯಂತೆ ಬ್ರಹ್ಮಾಂಡವನ್ನು ನಿರ್ಮಾಣ ಮಾಡಿದನು. ಅದನ್ನು ನೋಡಲಿಕ್ಕೆ ಸತಿಯಾದ ಪಾರ್ವತಿ ಸಹಿತ ಬಂದೆನು. ಅಲ್ಲಿ ರಚಿಸಿದ ಬ್ರಹ್ಮಾಂಡವನ್ನು ನೋಡಿ ಅಲ್ಲಿ ಸಂತೋಷಚಿತ್ತದಿಂದ ಒಂದು ಕಡೆ ಕುಳಿತುಕೊಂಡೆವು. ಆಗ ನನಗೆ ಸ್ವಲ್ಪ ನಿದ್ರೆ ಬರಲು ನಿದ್ರಾದಲ್ಲಿ ಲೋಲುಪ್ತನಾದೆನು. ಆ ಸಮಯದಲ್ಲಿ ಪಾರ್ವತಾದೇವಿ ಆನಂದ ಭರದಲ್ಲಿ ಮುಂದೆ ಹಾಲುಮತ ಉತ್ಪತ್ತಿಯಾಗಬೇಕೆಂತಲೋ ಪಾರ್ವತಾದೇವಿಯ ಸಂತತಿ ಮಕ್ಕಳಾಗಬೇಕೆಂತಲೋ ಒಮ್ಮಿಂದೊಮ್ಮೆ ಮೊಲೆ ತೊರೆದವು. ಮೊಲೆ ಹಾಲು ಸುರಿದು ವ್ಯರ್ಥವಾಗಬಾರದೆಂದು ಬಲದ ಮೊಲೆ ಹಾಲು ಮಣ್ಣಿನಲ್ಲಿ ಕಲಿಸಿ ಮುದ್ದೆ ಮಾಡಿ ಗಂಡಿನ ರೂಪ ಮಾಡಿದಳು. ಎಡದ ಮೊಲೆ ಹಾಲು ಮಣ್ಣಿನಲ್ಲಿ ಕಲಿಸಿ ಹೆಣ್ಣಿನ ರೂಪ ಮಾಡಿದಳು. ಆವಾಗ್ಗೆ ನಾನು ಎಚ್ಚತ್ತೆನು. ಈ ಆಟ ನೋಡಿ ಇದೇನೆಂದು ಗಿರಿಜೆಗೆ ಕೇಳಿದೆನು. ಆದಕ್ಕೆ ಗಿರಿಜೆಯು ಇವುಗಳ ಪ್ರಾಣವಿತ್ತು ರಕ್ಷಿಸಬೇಕು. ಅಂತಾ ಹೇಳಿದಳು. ಆದಕ್ಕೆ ಒಪ್ಪಿ ಜೀವ ಕಳೆ ತುಂಬಿ ಇವರು ಆದಿಗೆ ಕರ್ತೃಗಳಾಗಿ ಪಶುಪಾಲನಕ್ಕೂ ಮುಖ್ಯ ಬೀಜ ಬಿತ್ತಿ ಸರ್ವ ಪ್ರಾಣಿಗಳಿಗೆ ಸಂರಕ್ಷಣೆ ಮಾಡಲೇಬೇಕೆಂದು ಆಲೋಚಿಸಿ ಗಂಡು ರೂಪಕ್ಕೆ ಮುದ್ದಪ್ಪನೆಂತಲೂ ಹೆಣ್ಣು ರೂಪಕ್ಕೆ ಮುದ್ದವ್ವನೆಂತಲೂ ನಾಮವಿಟ್ಟು ಸತಿ ಪತಿಗಳನ್ನು ಮಾಡಿದೆನು. ಅವರೇ ಹಾಲುಮತದವರೆಂತಲೂ ಕುರಿ ಪಾಲನೆ ಮಾಡುವದರಿಂದ ಕುರುಬರೆಂತಲೂ ಮತ್ತು ಇವರು ಪಶುಪಾಲನ ವೃತ್ತಿಯಿಂದಲೂ ಮತ್ತು ಹೊಲ ಸಾಗು ಮಾಡಿ ಬಿತ್ತಿ ಬೆಳೆದು ಧನಿಕರಾದ ಕಾರಣ ಇವರಿಗೆ ಧನ ಅಂದರೆ ದ್ರವ್ಯ ಘರ ಅಂದರೆ ಮನೆ ಹೀಗೆ ಧನಗರರೆಂತಲೂ ನಾಮವಾಗಿದೆ. ಸತ್ಯದಿಂದ ದೃಢಭಕ್ತರಿರುವರು. ಅವರಿಗೆ ನೀನು ಕುಲದೇವನಾಗಿ ಮೆರೆದು ಬೀರೇಶ್ವರನಾಗಿ ಅನಂತ ಮಹಿಮೆಯನ್ನು ತೋರಿ ಪವಾಡುಗಳನ್ನು ಮಾಡಿ ಅವರನ್ನು ಉದ್ಧರಿಸಿ ನನ್ನ ಸನ್ನಿಧಿಗೆ

ಬರಬೇಕು. ನಾನು ಹಿಂದಕ್ಕೆ ಬ್ರಹ್ಮನ ಸತಿಯಳಾದ ಸರಸ್ವತಿಗೆ ಆಕೆಯ ತಪಸ್ಸಿಗೆ ಮೆಚ್ಚಿ ನಿನ್ನ ಉದರದಲ್ಲಿ ನನ್ನ ತೇಜಾಂಶ ರೂಪವೇ ನಿನಗೆ ಕಂದನಾಗಿ ಜನಿಸುವನೆಂದು ವರವನ್ನು ಕೊಟ್ಟಿರುವೆನು. ಆಕೆಯ ಗರ್ಭದಲ್ಲಿ ಜನಿಸಬೇಕೆಂದು ಹೇಳಿ ಅಪ್ಪಣೆ ಮಾಡಿದನು.

## ಬೀರೇಶನ ಜನನ.

ಹರನ ಅಪ್ಪಣೆಯಂತೆ ಬ್ರಹ್ಮನ ರಾಣಿಯ ಗರ್ಭದಲ್ಲಿ ಉದಿಸಿದನು. ಆವಾಗ್ಗೆ ಆಕೆ ಗರ್ಭವ ಧರಿಸಿ ನವ ಮಾಸ ತುಂಬಿ ಪರಮಾತ್ಮನು ಪ್ರಕಟವಾಗುವ ಕಾಲ ಪ್ರಾಪ್ತವಾಗಿ ಜನಿಸಿದಳು. ಆ ಕಾಲದಲ್ಲಿ ಹರ್ಷಯುಕ್ತಳಾದ ಮದನ ರೂಪದ ಮಗನನ್ನು ಹಡೆದಳು. ಬೀರೇಶ್ವರನು ಜನಿಸಿದ ಕಾಲದಲ್ಲಿ ಸಂತೋಷದಿಂದ ದೇವತೆಗಳು ಪುಷ್ಪವೃಷ್ಟಿಗೈದರು. ದೇವದುಂದುಭಿ ಮೊಳಗಿದವು. ಸರಸ್ವತಿದೇವಿಯು ಆನಂದದಿಂದ ಚನ್ನಾಗಿ ಪಾಲನ ಮಾಡುತ್ತಿದ್ದಳು. ಆ ವೇಳೆಯಲ್ಲಿ ಅಶರೀರವಾಣಿಯ ಮುಖದಿಂದ ಸೂಚಿಸಿದ್ದೇನೆಂದರೆ ಸರಸ್ವತಿ ದೇವಿಯೇ ಈ ನಿನ್ನ ಕಂದನು ನಿನ್ನಲ್ಲಿ ಜೋಪಾನವಾಗುವಂತಿಲ್ಲ. ನೀನು ಮಾಡಿದರೆ ಅನೇಕ ತರದ ಕಷ್ಟ ಅನುಭೋಗಿಸಬೇಕಾಗುವದು ಕಾರಣ ಈ ಕೂಸನ್ನು ತೊಟ್ಟಿಲದಲ್ಲಿಟ್ಟು ಅರಣ್ಯಕ್ಕೆ ಒಯ್ದು ಕಟ್ಟಿ ಬರಬೇಕು ಅಂತಾ ಹೇಳಿತು. ಇಲ್ಲವಾದರೆ ನಿಮಗೆ ಬರಬಾರದ ಕಷ್ಟಗಳು ಬಂದು ತೊಳಲಿ ಬಳಲಬೇಕಾದೀತು. ಮತ್ತು ಆ ಕೂಸನ್ನು ಈಶ್ವರನೇ ಸಂರಕ್ಷಣ ಮಾಡುವನು ನೀನು ಚಿಂತಿಸಬೇಡ ಅಂತಾ ಹೇಳಿತು. ಅನ್ನಲು ಅದನ್ನು ಕೇಳಿ ಸರಸ್ವತಿಗೆ ಬಹಳೇ ಖೇದವಾಯಿತು. ಅಯ್ಯೋ ದೈವವೇ ನಾನು ಈಶ್ವರನನ್ನು ಕುರಿತು ತಪಸ್ಸು ಮಾಡಿ ಬೇಡಿಕೊಂಡು ಹಡೆದ ಮಗನನ್ನು ಅಡವಿಗೆ ಕಳಿಸಬೇಕಾಯಿತೇ ಅಂತಾ ಬಹಳ ದುಃಖ ಮಾಡಿದಳು. ಉಪಾಯವಿಲ್ಲ ಅಲ್ಲಿಯಾದರೂ ಆ ಪರಮೇಶ್ವರನೇ ಸಂರಕ್ಷಣೆ ಮಾಡಲೆಂದು ದುಃಖಿಸುತ್ತಾ ಕೂಸನ್ನು ತೊಟ್ಟಿಲದಲ್ಲಿ ಹಾಕಿ ಘೋರಾರಣ್ಯದಲ್ಲಿ ಬಿಟ್ಟುಬರಬೇಕೆಂದು ಚಾರರನ್ನು ಕಳಿಸಿದರು. ಅದರಂತೆ ಅವರು ಅರಣ್ಯದಲ್ಲಿ ತೊಟ್ಟಿಲ ಕಟ್ಟಿ ಬಿಟ್ಟು ಬಂದರು. ಆವಾಗ್ಗೆ ಅಲ್ಲಿ ಅಡವಿಯೊಳಗೆ ಅಳುತ್ತಾ ಚೀರುತ್ತಾ ಹೊರಳ್ಯಾಡಹತ್ತಿತು. ಈ ಕಷ್ಟದ ವಾರ್ತೆಯನ್ನು ಅರಿತು ಶಿವನು ವಾಯುದೇವನಿಗೆ ತೊಟ್ಟಿಲ ತೂಗಲಿಕ್ಕೆ ಅಪ್ಪಣೆ ಮಾಡಿ

ದನು. ಅವರಂತೆ ವಾಯುದೇವನು ತೂಗಿದನು. ಪಾರ್ವತಿ ಪರಮೇಶ್ವರರು ಸ್ವತಃ ಒಂದು ಸುರನಾರಿಯರೆಲ್ಲರೂ ಕೂಡಿ ಆರೋಗಣೆ ಮಾಡಿ ಹನ್ನೆರಡನೇ ದಿವಸದಲ್ಲಿ ಆ ಕೂಸಿಗೆ ಬೀರೇಶ್ವರನೆಂಬ ನಾಮವನ್ನಿಟ್ಟು ಜೋಗಳ ಪಾಡಿದರು. ಅವನ ಬೆರಳಲ್ಲಿ ಅಮೃತವನ್ನಿಟ್ಟು ಜೋಪಾನವಾಗಿದ್ದು ಅಕ್ಕ ಮಾಯಮ್ಮನಿಗೆ ಒಲಿದು ಪ್ರಬುದ್ಧನಾಗಿ ಮೆರೆಯೆಂದು ಹರಿಸಿ ದೇವಲೋಕಕ್ಕೆ ತೆರಳಿದರು. ಹಾಗು ಗಿರಿಜೆಯು ಧರೆಯೊಳು ರಿಪುಗಳನ್ನು ಗೆದ್ದು ಪವಾಡಗೈದು ಮಹಿಮನೆಂದು ಬಾಳು ಅಂತಾ ಹರಿಸಿಹೋದಳು. ಕಾಮಧೇನುವಿಗೆ ನೀನು ಹಾಲು ಕೊಟ್ಟು ರಕ್ಷಣೆ ಮಾಡೆಂದು ಹೇಳಿ ಅಪ್ಪಣೆ ಮಾಡಿದರು. ಆವಾಗ್ಗೆ ರಜತಾದ್ರಿಯನ್ನು ಬಿಟ್ಟು ಪರಮೇಶ್ವರನು ಕೊಲ್ಲಿಪಾಕಿಗೆ ಬಂದರು.

## ಐದು ಮಂದಿ ದೇವಗನ್ನೇರರ ಉದರದಿಂದ ಐದು ಹೆಣ್ಣುಮಕ್ಕಳು ಜನನವಾದದ್ದು.

ಹಿಂದಕ್ಕೊಮ್ಮೆ ಪರಮೇಶ್ವರನು ಒಂದು ವಟವೃಕ್ಷಕ್ಕೆ ಈ ವೃಕ್ಷದ ಬುಡದಲ್ಲಿ ಕೂತ ಸ್ತ್ರೀಯರು ಗರ್ಭವತಿಯರಾಗಲಿ ಎಂದು ವರವನ್ನು ಕೊಟ್ಟಿದ್ದರು. ಅದೇ ಪ್ರಕಾರ ಐದು ಮಂದಿ ಗಂಧರ್ವ ಸ್ತ್ರೀಯರು ಆ ವಟವೃಕ್ಷದ ಬುಡದಲ್ಲಿ ಹೋಗಿ ಕೂಡ್ರಲು ಅಲ್ಲಿ ಪರಮಾತ್ಮನ ವರವಿನ ಪ್ರಕಾರ ಆ ಸ್ತ್ರೀಯರು ಗರ್ಭವತಿಯರಾದರು. ಆಗ ಅವರು ಬೆದರಿ ಇದು ಏನು ಆಶ್ಚರ್ಯ. ಈ ಗರ್ಭದಿಂದ ನಮ್ಮ ಲೋಕಕ್ಕೆ ಹೋದರೆ ನಮ್ಮ ಸುರರು ನಮ್ಮನ್ನು ದಂಡಿಸುವರು. ಎಂದು ವನಿತೆಯರು ಚಿಂತಿಸಿ ಇದಕ್ಕೇನು ಮಾಡಬೇಕು. ಎಂದು ಆಲೋಚಿಸಿ ತಮ್ಮ ಹೊಟ್ಟೆಯನ್ನು ಉಗುರುಗಳಿಂದ ಸೀಳಿ ಐದು ಹೆಣ್ಣು ಕೂಸುಗಳನ್ನು ಕೂಡಿಸಿ ನದಿಯಲ್ಲಿ ತೇಲಿಬಿಟ್ಟರು. ಆ ಮೇಲೆ ಗಂಧರ್ವ ಲೋಕಕ್ಕೆ ತೆರಳಿದರು. ನದಿಯಲ್ಲಿ ತೇಲಿಬಿಟ್ಟ ಐದೂ ಹೆಣ್ಣು ಕೂಸುಗಳು ತೇಲುತ್ತಾ ಹೋಗುತ್ತಿರಲು ಹೊಳೆಯ ದಂಡೆಯಲ್ಲಿ ಚಾಮರಾಜನೆಂಬುವನು ಕುರಿಗಳನ್ನು ಮೇಯಿಸುತ್ತಾ ನಿಂತಿದ್ದನು. ತೇಲಿಬರುವ ಕೂಸುಗಳನ್ನು ನೋಡಿ ಹೊಳೆಯಲ್ಲಿ ಧುಮುಕಿ ಅವುಗಳನ್ನು ತೆಗೆದುಕೊಂಡು ತನ್ನ ಮನೆಗೆ ಹೋದನು.

## ಹೇಮಣ್ಣನೆಂಬವನಿಗೆ ಹೆಣ್ಣು ಕೂಸು ದೊರೆತದ್ದು.

ತನ್ನ ಅರ್ಧಾಂಗಿನಿಯಾದ ಶಾಂಭವಿಯ ಕೈಯಲ್ಲಿ ಆ ಐದೂ ಹೆಣ್ಣು ಶಿಶುಗಳನ್ನು ಕೊಟ್ಟನು. ಶಾಂಭವಿಯು ಆ ಶಿಶುಗಳನ್ನು ನೋಡಿ ಮನಸ್ಸಿ ಸಂತೋಷನೆಂಬ ಕಡಲಿಲ್ಲಿ ಮುಳುಗಿದಳು. ಮತ್ತು ದೇವರನ್ನು ಕುರಿತು ಹೀಗೆಂದಳು. ಹೇ ದೇವರ ದೇವನಾದ ಶಂಭುವೇ ನನಗೆ ಇಲ್ಲಿಯ ವರೆಗೂ ಮಕ್ಕಳನ್ನೇ ಕೊಡಲಿಲ್ಲ. ಈ ಹೊತ್ತು ಈ ಶಿಶುಗಳನ್ನು ದಯಪಾಲಿಸಿಕೊಟ್ಟೆ ಎಂದು ಹಿರಿ ಹಿರಿ ಹಿಗ್ಗಿದಳು. ಮತ್ತು ಚೆನ್ನಾಗಿ ಜೋಪಾನ ಮಾಡುತ್ತ ಊರಲ್ಲಿಯ ಮಾಂಗಲ್ಯವತಿಯರಾದ ವನಿತೆಯರನ್ನೂ ಯಜಮಾನಿಯರನ್ನೂ ಕರೆಯಿಸಿ ತೊಟ್ಟಿಲದಲ್ಲಿ ಹಾಕಿ ಐದೂ ಹೆಣ್ಣುಮಕ್ಕಳಿಗೆ ಕ್ರಮವಾಗಿ ಮಾಯಿ ಮಹಾಂಕಾಳಿ, ಮಂಕಮ್ಮ, ಅಕ್ಕಮಾಯಮ್ಮ, ಮತ್ತು ಲಕ್ಷ್ಮಿಯೆಂದು ನಾಮಕರಣ ಮಾಡಿ ವಿಜೃಂಭಣೆಯಿಂದ ಹಾಡಿ ಹರಿಸಿದರು. ಆ ಮೇಲೆ ಅವ ರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು. ಶಾಂಭವಿಯು ಆ ಕೂಸುಗಳಿಗೆ ಹಾಲು ಬೆಣ್ಣೆಗಳನ್ನಿತ್ತು ಜೋಪಾನ ಮಾಡಿದಳು. ಆ ಕೂಸುಗಳು ಮತಿವಂತ ರಾಗಿ ಪ್ರಾಯಕ್ಕೆ ಬರಲು ತಂದೆಯ ಸಂಗಡ ಕುರಿಗಳನ್ನು ಕಾಯುವದಕ್ಕೆ ದಿನಾಲು ಹೋಗುತ್ತಿದ್ದರು. ಕುರಿಗಳನ್ನು ಕಾಯುತ್ತಾ ಒಂದು ದಿನ ಐದೂ ಮಂದಿ ಹೆಣ್ಣುಮಕ್ಕಳು ಕೂಡಿ ಹೇವಲಿ ಎಂಬ ಹಳ್ಳಕ್ಕೆ ಬಂದರು. ಅಲ್ಲಿ ಹಳ್ಳದ ಹತ್ತಿರ ಇರುವ ಒಂದು ವಟವೃಕ್ಷದಲ್ಲಿ ತೂಗಾಡುತ್ತಿರುವ ಒಂದು ತೊಟ್ಟಿಲವನ್ನು ಐವರೂ ನೋಡಿದರು. ತೊಟ್ಟಿಲಲ್ಲಿ ಅಳುವ ಚೀರುವ ಕೂಸಿನ ಧ್ವನಿಯನ್ನು ಕೇಳಿ ಆಶ್ಚರ್ಯಚಕಿತರಾದರು. ಇದು ಏನು ಸೋಜಿಗವೆಂದು ಆ ನಾರಿಮಣಿಯರು ನಾ ಮುಂದೆ ನೀ ಮುಂದೆ ಎನ್ನುತ್ತ ಮರವನ್ನು ಹತ್ತಿ ಆ ಕೂಸಿನ ತೊಟ್ಟಿಲವನ್ನು ಬಿಚ್ಚಿ ಕೆಳಗೆ ಇಳಿಸಿದರು. ಆ ಕನ್ಯೆಯರು ಎವೆ ಇಕ್ಕದೆ ನೋಡಿ ಸಂತೋಷಭರಿತರಾಗಿ ಈ ಕೂಸನ್ನು ನಾನು ತೆಗೆದುಕೊಳ್ಳುವೆ, ನಾನು ತೆಗೆದುಕೊಳ್ಳುವೆ. ಎಂದು ತಮ್ಮ ತಮ್ಮೊಳಗೆ ಜಗಳಾಡಹತ್ತಿದರು. ಅವರಲ್ಲಿ ಒಬ್ಬಳು ಅಂದರೆ ಅಕ್ಕಮ್ಮನೆಂಬವಳು ಅಂದದ್ದೇನಂದರೆ ನಾನು ಒಂದು ಯುಕ್ತಿಯನ್ನು ಹೇಳುತ್ತೇನೆ. ಯಾವತ್ತರೂ ಅದಕ್ಕೆ ಒಪ್ಪಬೇಕು. ಎಂದು ಸಮಾಧಾನ ಮಾಡಿದಳು. ಆಗ ಉಳಿದವರೆಲ್ಲರೂ ನಿನ್ನ ಯುಕ್ತಿಯನ್ನು

ಹೇಳು ಅಂದರು. ಅಕ್ಕಮ್ಮನು ಮುಂದಿನ ವಿಚಾರವನ್ನು ಹೇಳಹತ್ತಿದಳು. ನಾವೆಲ್ಲರೂ ಕೂಡಿ ಸಾಂಬಶಿವನನ್ನು ಕುರಿತು ಸ್ತೋತ್ರಮಾಡಿ ಉಡಿ ಒಡ್ಡಬೇಕು. ಸದಾಶಿವನು ಈ ಕಂದನನ್ನು ಯಾರ ಉಡಲಲ್ಲಿ ಇರಿಸುವನೋ ಆಕೆಯೇ ಈ ಕಂದದ ತಾಯಿಯು ಅಂತಾ ಹೇಳಿದಳು. ಅದಕ್ಕೆ ಅವರೆಲ್ಲರೂ ಒಪ್ಪಿಕೊಂಡು ಶ್ರೀ ಮಹದೇವನ ಸ್ತೋತ್ರವನ್ನು ಒಂದೇ ಮನಸ್ಸಿನಿಂದ ಮಾಡಹತ್ತಿದರು. ಜಗತ್ತಿನ ಪಾಲನ ಮಾಡುವಂಥ ದೇವರ ದೇವನಾದ ಶ್ರೀ ಶಂಕರನು ಮೆಚ್ಚಿ ಪ್ರತ್ಯಕ್ಷನಾಗಿ ಆ ಕಂದನನ್ನು ಅಕ್ಕ ಮಾಯವ್ವನ ಉಡಿಯಲ್ಲಿ ಹಾಕಿದನು.

## ಅಕ್ಕ ಮಾಯವ್ವನಿಗೆ ಬೀರೇಶನು ದೊರೆತದ್ದು.

ಅಕ್ಕ ಮಾಯವ್ವನು ಆ ಕೂಸನ್ನು ತಕ್ಕೊಂಡು ಹರುಷದಿಂದ ಲೋಲಾಡಿದಳು. ಸಾಕ್ಷಾತ್ ಮುಕ್ಕಣ್ಣನು ತನ್ನ ನಿಜರೂಪದಿಂದ ಆ ಮಗುವಿನ ಮುಂದಿನ ಯಾವತ್ತೂ ಚರಿತ್ರವನ್ನು ಅಕ್ಕ ಮಾಯವ್ವನಿಗೆ ಸವಿಸ್ತಾರವಾಗಿ ಹೇಳಿದನು. ಈ ಕಂದನಿಗೆ ಬೀರೇಶ್ವರನೆಂದು ಹೆಸರಿಟ್ಟು ಚನ್ನಾಗಿ ಕಾಪಾಡಿರೆಂದು ಹೇಳಿದನು. ಇಂದುಧರನು ಆ ಶಿಶುವಿನ ತಲೆಯ ಮೇಲೆ ವರದ ಹಸ್ತವನ್ನಿಟ್ಟು ವರವನ್ನು ಕೊಟ್ಟನು. ಆ ವರವೇನೆಂದರೆ:— ನಿನ್ನ ನುಡಿಯಲ್ಲಿ ಮಂತ್ರ ತಂತ್ರಗಳು ಉದ್ಭವಿಸಲಿ. ಮತ್ತು ನಿನಗೆ ಸಿದ್ಧಬೀರನೆಂದು ಹೆಸರು ಬೀಳಲಿ. ಮುಂದೆ ನಿನಗೆ ಶ್ರೀಗುರು ರೇವಣಸಿದ್ಧೇಶ್ವರನು ಗುರುವಾಗಲಿ ಎಂದು ಆಶೀರ್ವದಿಸಿ ಶ್ರೀ ಮುಕ್ಕಣ್ಣನು ಕೈಲಾಸಕ್ಕೆ ತೆರಳಿದನು. ಇತ್ತ ಅಕ್ಕ ಮಾಯವ್ವನು ಲಗುಬಗೆಯಿಂದ ಕಂದನನ್ನು ಹಾಗೂ ತೊಟ್ಟಿಲವನ್ನು ತಕ್ಕೊಂಡು ತನ್ನ ಮಂದಿರಕ್ಕೆ ಬಂದಳು. ಆ ವೇಳೆ ಮನೆಯಲ್ಲಿ ತೊಟ್ಟಿಲವನ್ನು ಕಟ್ಟಿ ಯಾವತ್ತರೂ ಮಗುವನ್ನು ಪ್ರೇಮದಿಂದ ಜೋಪಾನ ಮಾಡಿದರು. ಆಗ ಚಾಮರಾಜನು ತನ್ನ ಹೆಂಡತಿಯಾದ ಶಾಂಭವಿಯನ್ನು ಕುರಿತು ಅಂದದ್ದು ನಮಗೆ ಅಡವಿಯಲ್ಲಿ ಈ ಕೂಸನ್ನು ಶಂಕರನು ದಯಪಾಲಿಸಿರುವನು, ಈ ಬಾಲಕನನ್ನು ಪ್ರೇಮದಿಂದ ಕಾಪಾಡಬೇಕು. ಒಂದಾನೊಂದು ದಿನ ಆ ಬಾಲಕನು ಮರಿ ಉಂಡ ಎಂಜಲದ ಹಾಲನ್ನು ಕುಡಿಯುವದಿಲ್ಲವೆಂದು ಹಟ ತೆಗೆದು ಕುಳಿತಿದ್ದನು. ಈ ಸಂಗತಿ ಶಿವನಿಗೆ ತಿಳಿಯಲು ಆವನು ಅಕ್ಕ ಮಾಯವ್ವನಿಗೆ ತನ್ನ ನಿಜರೂಪ ತೋರಿ ಅಂದದ್ದು:—

## ಸುರನಾರಿಯು ಕುರಿಯಾಗಿ ಬೀರೇಶನಿಂದ ಶಾಪವಿಮೋಚನೆ ಆದದ್ದು.

ನಿಮ್ಮ ಕುರಿಯ ಹಿಂಡಿನೊಳಗೆ ಕೈಲಾಸದಲ್ಲಿಯ ಸುರನಾರಿಯಳೊಬ್ಬಳು ಗಿರಿಜೆಗೆ ನಿಂದಿಸಿದ್ದಳು. ಆಗ ಗಿರಿಜೆಯು ಆ ನಾರಿಯಳಿಗೆ ನೀನು ಭೂತಳದಿ ಕುರಿಯಾಗಿ ಹುಟ್ಟು ಎಂದು ಶಾಪವನ್ನು ಕೊಟ್ಟಳು. ಆ ಮೇಲೆ ಸುರನಾರಿಯು ಗೌರಿಯನ್ನು ಕುರಿತು ಶಾಪಮುಕ್ತ ಮಾಡು ದೇವೀ ಎಂದು ಅಂಗಲಾಚಿ ಬೇಡಿಕೊಂಡಳು. ಆಗ ಗಿರಿಜೆಯು ನಿನ್ನ ಹಾಲನ್ನು ಬೀರೇಶನು ಯಾವಾಗ ಕುಡಿಯುವನೋ ಆಗ ಶಾಪಮುಕ್ತಳಾಗಿ ಕೈಲಾಸಕ್ಕೆ ಬರುವಿ ಅಂತಾ ಹೇಳಿದಳು. ಆಗ ಕೊರಳು ಮಲೆಯುಳ್ಳ ಕಂಚುಬೋಳಿಯ ಕುರಿಯಾಗಿ ಹುಟ್ಟಿದಳು. ಆ ಕಂಚುಬೋಳಿಯ ಕುರಿಯ ಹಾಲು ಕುಡಿಸಿರೆಂದು ದೇವನು ಅಕ್ಕಮ್ಮನಿಗೆ ಹೇಳಿದನು ಆಗ ಅಕ್ಕಮ್ಮನು ಕುರಿಯ ಹಿಂಡಿನಲ್ಲಿ ಹುಡುಕಿ ಆ ಕುರಿಯ ಕೊರಳ ಮೊಲೆಯ ಹಾಲು ತಂದು ಕುಡಿಸಿದಳು. ಆಗ ಗಂಧರ್ವಳು ಶಾಪಮುಕ್ತಳಾಗಿ ತನ್ನ ಲೋಕಕ್ಕೆ ಹೋದಳು

## ಅನೇಕ ಪವಾಡ ಮಾಡಿದ್ದು, ಬೆಳ್ಳಿಗುತ್ತಿಗೆ ಹೋದದ್ದು.

ಆ ಮೇಲೆ ಗುರುವಾದ ಶ್ರೀ ರೇವಣಶಿದ್ಧೇಶ್ವರನು ಶ್ರೀ ಬೀರೇಶನಿಗೆ ಜ್ಞಾನ ಭೋದ ಮಾಡಿ ಪಂಚಾಕ್ಷರಿ ಮಂತ್ರ ಬೋಧಿಸಿದನು. ಮತ್ತು ನೀನು ಕುರುಬರ ಕುಲದೇವನಾಗೆಂದು ಹೇಳಿ ಗುರುವು ಕೈಲಾಸಗಿರಿಗೆ ನಡೆದನು. ಇತ್ತ ಬೀರೇಶನು ಚಂಡಿನ ಆಟವನ್ನು ಆಡುತ್ತ ಲಿಂಗಬಸಪ್ಪನೆಂಬ ಹುಡುಗನಿಗೆ ಚಂಡಿನಿಂದ ಹೊಡೆಯಲು ಆ ಹುಡುಗನು ಮರಣಹೊಂದಿದನು. ಆಗ ಅವನ ತಂದೆ ತಾಯಿಯರು ಅಳುತ್ತ ಬರಲು ಅದನ್ನು ನೋಡಿ ಬೀರೇಶನು ಗುರುಮಂತ್ರವನ್ನು ಪಠಣ ಮಾಡಿ ಲಿಂಗಬಸಪ್ಪನ ಪ್ರಾಣ ಪಡೆದನು ನೆರೆದ ಜನರೆಲ್ಲರು ನೋಡಿ ಇವನು ನರಮನುಜನಲ್ಲ ಎಂದು ಕೊಂಡಾಡಿ ಶಿವನ ಅವತಾರವೆಂದು ಹರಿಸಿದರು. ಮುಂದೆ ಅಕ್ಕಮಾಯಮ್ಮನು ತಮ್ಮನನ್ನು ಕರಕೊಂಡು ಬೆಳ್ಳಿಗುತ್ತಿಗೆ ಹೊರಟಳು. ಹೋಗುವ ಮಾರ್ಗದಲ್ಲಿ ಹುತ್ತವನ್ನು ನೋಡಿ ಅಲ್ಲಿ ಬೀರೇಶನು ನಾಗನಾಗಿ ಆ ಹುತ್ತಿನಲ್ಲಿ ಹೊಕ್ಕನು. ಪುನಃ ಬಂದು

ಅಲ್ಲಿ ಬೆತ್ತದ ನಾಗರಾಜನೆಂಬ ಪುರವಾಗಲಿ ಎಂದು ಹರಿಸಿದನು. ಆ ಮೇಲೆ ಬೆಳ್ಳಿಗುತ್ತಿಗೆ ಬಂದರು. ಅಲ್ಲಿ ಯಾವತ್ತೂ ಜನರು ನೋಡಿ ಇವರು ಮಹಾ ಮಹಿಮರೆಂದು ತಿಳಿದು ಅವರ ಪಾದಕ್ಕೆರಗಿದರು. ಹೇಮಣ್ಣನೆಂಬ ಹಿರೀ ಕುರುಬನು ನೀವು ಯಾರು? ನಿಮ್ಮ ಪುರ ಯಾವದು? ನಿಮ್ಮ ಹೆಸರೇನು? ಈ ಹುಡುಗನು ಯಾರು? ಎಂದು ವಿನಯದಿಂದ ಕೇಳಿದನು. ಅದಕ್ಕೆ ಅಕ್ಕಮ್ಮನು ಇವನು ನನ್ನ ತಮ್ಮನಾದ ಬೀರೇಶನು. ನನ್ನ ಹೆಸರು ಅಕ್ಕಮಾಯಮ್ಮನು. ನಮ್ಮ ಜನ್ಮಸ್ಥಾನ ಮಂದಾರಗಿರಿ ಎಂಬ ಊರು ಎಂದು ಉತ್ತರ ಕೊಟ್ಟಳು. ಅಷ್ಟರಲ್ಲಿ ಹೇಮಣ್ಣನ ಸತ್ತ ಕುರಿಗಳನ್ನು ಹೊತ್ತುಕೊಂಡು ಅಲ್ಲಿಂದ ಒಯ್ಯುವಾಗ್ಗೆ ಶ್ರೀ ಬೀರೇಶ್ವರನು ಅಲ್ಲಿಯೇ ಚಲ್ಲಿಸಿ ತಾನು ಮಂತ್ರ ಪಠಣ ಮಾಡಿ ಸತ್ತ ಕುರಿಗಳನ್ನು ಬದುಕಿಸಿ ತಾನು ಮೆರೆದನು. ಹೇಮಣ್ಣನು ಇದನ್ನು ನೋಡಿ ಬೆರಗಾಗಿ ಅವರನ್ನು ಮಾನ ಮರ್ಯಾದೆಗಳಿಂದ ಕರೆದು ಕೊಂಡು ತನ್ನ ಮಂದಿರಕ್ಕೆ ಹೋದನು.

## ಹೇಮಣ್ಣನೆಂಬುವವನು ನಮ್ಮ ಕುಲದೇವರೆಂದು ಭಕ್ತಿಯಿಂದ ಪೂಜಿಸಿ ಸರ್ವರೂ ನಡೆಯುವಂತೆ ಉಪದೇಶ ಮಾಡಿದನು.

ಆ ಮೇಲೆ ಹೇಮಣ್ಣನು ತನ್ನ ಎಲ್ಲ ಕುರುಬರನ್ನು ಕೂಡಿಸಿ ನಮ್ಮಲ್ಲಿಗೆ ಬಂದಿರುವ ಈ ಮಹಾಮಹಿಮರು ನಿನ್ನಿನ ದಿವಸ ಜೇನೆಯಿಂದ ಸತ್ತ ಕೆಲವು ಕುರಿಗಳನ್ನು ಬದುಕಿಸಿದ್ದು ಎಲ್ಲರಿಗೂ ತಿಳಿದಿದೆ. ಇವರನ್ನು ನಮ್ಮ ಕುಲ ದೇವರೆಂದು ಪ್ರಾರ್ಥಿಸಿಕೊಂಡು ಇವರಿಗೆ ಮನೆಗೆ ಒಂದರಂತೆ ಒಂದು ಕುರಿಯನ್ನು ಕಾಣಿಕೆಯಾಗಿ ಕೊಟ್ಟು ಆ ಕುರಿ ಹಿಂಡಿಗೆ ಪಾಲನ ಮಾಡುವದಕ್ಕೆ ನನ್ನ ಮಗನನ್ನು ಆಳಾಗಿ ಇಡುವೆನು. ಅಂತಾ ಹೇಮಣ್ಣನು ಹೇಳಿದನು. ಅದಕ್ಕೆ ಎಲ್ಲರೂ ಒಪ್ಪಿ ತಮ್ಮ ತಮ್ಮ ಮನೆಯಿಂದ ಕುರಿಯನ್ನು ತಂದುಕೊಟ್ಟರು. ಅವುಗಳನ್ನು ಪಾಲನ ಮಾಡಲಿಕ್ಕೆ ಹೇಮಣ್ಣನ ಮಗನು ಸಿದ್ಧನಾದನು. ಮರು ದಿನ ಯಾವತ್ತೂ ಹಾಲುಮತ ಕುರುಬರು ಭಕ್ತಿಯಿಂದ ತಮ್ಮ ತಮ್ಮೊಳಗೆ ವಿಚಾರ ಮಾಡಿಕೊಂಡು ಶ್ರೀ ಬೀರೇಶ್ವರನಿಗೆ ಅಕ್ಕಮಾಯಮ್ಮನಿಗೆ ಗುಡಿ

ಯನ್ನು ಕಟ್ಟಿಸಿ ಅವರನ್ನು ಅಲ್ಲಿ ಇರಿಸಿ ನಮ್ಮ ಜಾತಿಯವರೆಲ್ಲರೂ ನಮ್ಮ ಕುಲದೇವನೆಂದು ಭಕ್ತಿಯಿಂದ ನಡಕೊಳ್ಳೋಣವೆಂದು ನಿರ್ಧರಿಸಿದರು. ಈ ಧರೆಯಲ್ಲಿಯ ಯಾವತ್ತೂ ಕುಲಬಾಂಧವರಿಗೆ ಈ ದೇವನ ವೃತ್ತಾಂತವನ್ನು ಅರುಹಿ ಇವರಿಗೆ ನಡಕೊಳ್ಳಲಿಕ್ಕೆ ಹಚ್ಚಿದರು. ಈ ಮಹಾತ್ಮನಾದ ಬೀರೇಶ್ವರನು ಚಮತ್ಕಾರವಾದ ಪವಾಡಗಳನ್ನು ಮಾಡಿ ಎಲ್ಲರಲ್ಲಿಯೂ ಭಕ್ತಿ ಹುಟ್ಟುವಂತೆ ಮಾಡಿದನು. ಮತ್ತು ಅಲ್ಲಿ ದೊಡ್ಡದೊಂದು ದೇವಾಲಯವನ್ನು ಕಟ್ಟಿಸಿ ಅಲ್ಲಿಯೇ ಇರುವಂತೆ ಮಾಡಿದರು. ಇತ್ತ ಬೀರೇಶನು ಜೆಳ್ಳಿಗುತ್ತಿಯಲ್ಲಿರುತ್ತಿರಲು ಒಂದಾನೊಂದು ದಿವಸ ದಾನಶೂರನಾದ ಹೇಮಣ್ಣನ ಮಗನು ರೋಗದಿಂದ ಮರಣಹೊಂದಲು ಆ ಸತ್ತ ಮಗನನ್ನು ಶೋಕ ಮಾಡುತ್ತ ಹೊತ್ತುಕೊಂಡು ಬಂದು ಬೀರೇಶನ ಪಾದಕ್ಕೆ ಹಾಕಿದರು. ಆ ಮೇಲೆ ದೇವರು ಅವನ ಪ್ರಾಣವನ್ನು ಭಂಡಾರ ಭಸ್ಮ ಹಚ್ಚಿ ಮಂತ್ರೋಪದೇಶದಿಂದ ಪಡೆದನು. ಆಗ ಆ ಮಲ್ಲಿನೆಂಬ ಹುಡುಗನು ಸಜೀವನಾಗಿ ಬದುಕಿದನು. ಮತ್ತು ಅದೇ ಊರಲ್ಲಿ ಕುಡುವಕ್ಕಲಿಗನಾದ ಮುದ್ದಪ್ಪನೆಂಬವನ ಮಗ ಬುಳ್ಳನೆಂಬವನು ಮರಣಹೊಂದಲು ಅವನನ್ನು ಸಹ ಭಸ್ಮ ಲೇಪಿಸಿ ಬದುಕಿಸಿದನು. ಈ ಪ್ರಕಾರ ಹಲವು ಪವಾಡಗಳನ್ನು ಮಾಡಿ ಮೆರೆದನು. ಹೀಗಾಗಿ ಜಗತ್ತಿನ ಜನರೆಲ್ಲರು ಅತಿ ಭಕ್ತಿಯಿಂದ ನಮ್ಮ ಕುಲದೇವನೆಂದು ನಡೆಯಹತ್ತಿದರು. ಆವಾಗ್ಗೆ ಬೀರೇಶನು ಪ್ರಾಯಕ್ಕೆ ಒರಲು ಅಕ್ಕ ಮಾಯವ್ವನು ತಮ್ಮ ಎಲ್ಲ ಭಕ್ತಜನರನ್ನು ಕೂಡಿಕೊಂಡು ನನ್ನ ತಮ್ಮ ಬೀರೇಶ್ವರನು ಪ್ರಾಯಕ್ಕೆ ಬಂದಿರುವನು. ಅವನ ಲಗ್ನ ಮಾಡಬೇಕು. ಅವನಿಗೆ ಸರಿಯಾದ ಕನ್ಯೆಯು ವೈಕುಂಠಪತಿಯಾದ ಶ್ರೀಹರಿಯ ಮಗಳಾದ ಕನ್ಯಕೋಮಾಲಿ ಎಂಬವಳು ಇರುವಳು. ಆಕೆಯು ಲೋಕೈಕ ಸುಂದರಿಯೂ ಗುಣಗಳಲ್ಲಿ ಸುಶೀಲೆಯೂ ಇರುವಳು. ಆಕೆ ಈ ಬೀರೇಶ್ವರನನ್ನೇ ಲಗ್ನವಾಗಬೇಕೆಂಬ ಲವಲವಿಕೆಯಿಂದ ಲೋಕಮಾತೆಯಾದ ಪಾರ್ವತಾದೇವಿಯ ಪೂಜೆಗೈಯುತ್ತಿರುವಳು ಹಾಗು ಬೀರೇಶನ ಸಹೋದರ ಸೊಸೆಯಾಗಬೇಕು. ಈ ಕನ್ಯಾ ರತ್ನವನ್ನು ತಂದು ಲಗ್ನ ಮಾಡಬೇಕು. ಅಂತಾ ಸರ್ವರಿಗೂ ತಿಳಿಸಿದರು. ಆಗ ಯಾವತ್ತೂ ಭಕ್ತರು ಅತ್ಯಂತ ಸಂತೋಷದಿಂದ ಒಪ್ಪಿದರು. ಆಗ ಬೀರೇಶ್ವರನು ಹೇ ಅಕ್ಕಾ

ಆ ಕನ್ನೆಯನ್ನು ಶ್ರೀಹರಿಯು ಬೇಡಿಕೆಯಿಂದ ಕೊಡುವದಿಲ್ಲ. ಅವನು ನನ್ನ ಮೇಲೆ ಏನೋ ಒಂದು ನಿಮಿತ್ಯವಾಗಿ ಸಿಟ್ಟಾಗಿರುವನು. ಕಾರಣ ನಾನೇ ವೈಕುಂಠಕ್ಕೆ ಹೋಗಿ ಆ ಕನ್ಯೆಯನ್ನು ಗೆದ್ದು ತರುವೆನು. ಅಂತಾ ಹೇಳಿದನು. ಅಲ್ಲಿ ಅನೇಕ ಜನ ಕಾವಲುಗಾರರನ್ನು ಇಟ್ಟಿರುವನು. ಅವರನ್ನು ನನ್ನ ಲೀಲಾ ಮಹಿಮೆಯಿಂದ ನಾಶ ಮಾಡಿ ತರುತ್ತೇನೆ. ನನಗೆ ಅಪ್ಪಣೆ ಕೊಡೆಂದು ಕೇಳಿದನು. ಆಗ ಅಕ್ಕಮಾಯವ್ವನು ಸಂತೋಷದಿಂದ ಹರಿಸಿ ಆಶೀರ್ವಾದ ಮಾಡಿ ಕಳುಹಿದಳು. ಅಲ್ಲಿ ಮಾಯಾವಿಯಾಗಿ ಗುಪ್ತದಿಂದ ವೈಕುಂಠ ಪುರವನ್ನು ಪ್ರವೇಶ ಮಾಡಿದನು. ಆ ವೇಳೆಯಲ್ಲಿ ಶ್ರೀಹರಿಯು ಇದ್ದಿಲ್ಲ. ಇಂಥ ಸಮಯವನ್ನು ತಿಳಿದು ಸಾಧಿಸಿ ಅವನ ಬಲವನ್ನು ತನ್ನ ವೀರ ಅವತಾರದಿಂದ ಮರ್ದಿಸಿ ಆ ಕನ್ಯೆಕೋಮಾಲಿಯನ್ನು ಅಲ್ಲೇ ಇರುವ ವಾಯು ವೇಗದ ಕುದುರೆಯನ್ನು ತಕ್ಕೊಂಡು ಅದರ ಮೇಲೆ ಕನ್ಯೆಯನ್ನು ಕೂಡ್ರಿಸಿ ತಾನು ಆರೋಹಣ ಮಾಡಿಕೊಂಡು ಸ್ವಲ್ಪ ವೇಳೆಯಲ್ಲಿಯೇ ಪಟ್ಟಣ ಕೋಡೇರಿ ಎಂಬ ಗ್ರಾಮಕ್ಕೆ ಬಂದು ಅಲ್ಲಿ ತನ್ನ ಮಹಿಮೆಯನ್ನು ತೋರಿಸಿ ಭಕ್ತ ಜನರಿಗೆ ಉಪದೇಶ ಮಾಡಿ ನನ್ನನ್ನು ಭಕ್ತಿಯಿಂದ ನಡಕೊಂಡು ಸ್ತೋತ್ರ ಮಾಡಿದವರಿಗೆ ಬೇಡಿದ ವರಗಳನ್ನು ಕೊಡುವೆನೆಂದು ಹೇಳಿ ಅಲ್ಲಿಂದ ಬೆಳ್ಳಿಗುತ್ತಿ ಪುರಕ್ಕೆ ಬಂದನು.

## ಬೀರೇಶನ ವಿವಾಹವಾದದ್ದು.

ಅದನ್ನು ನೋಡಿ ಅಕ್ಕಮಾಯವ್ವನಿಗೂ ಸರ್ವ ಭಕ್ತಾದಿ ಜನರಿಗೂ ಸಂತೋಷವಾಗಿ ಮುಂದೆ ಲಗ್ನ ಸಮಾರಂಭ ಮಾಡಲಿಕ್ಕೆ ಸರ್ವರು ನಿಂತು ಕೊಂಡರು. ಆಗ ಪಟ್ಟಣದ ಪ್ರಮುಖ ಜನರನ್ನು ಕರೆಯಿಸಿ ಊರು ಶ್ರಿಂಗಾರ ಮಾಡಲಿಕ್ಕೆ ತಿಳಿಸಿದರು. ಪರಿಚಾರಕರನ್ನು ಕರೆಯಿಸಿ ವಿವಾಹ ಮಂಟಪ ರಚಿಸಲಿಕ್ಕೆ ಹೇಳಿದರು. ಆಗ ಚಿತ್ರ ವಿಚಿತ್ರದಿಂದ ಸುವರ್ಣಮಯವಾದ ಮಂಟಪ ರಚಿಸಿದರು. ಅಂಥ ಸುಂದರ ಮಂಟಪವು ನೋಡುವವರ ಕಣ್ಣಿಗೆ ದಿಗ್ಭ್ರಾಂತರನ್ನಾಗಿ ಮಾಡುತ್ತಿತ್ತು. ಆಗ ಸರ್ವರಿಗೂ ವಿವಾಹದ ಓಲೆಯನ್ನು ಬರೆದು ಕಳುಹಿದರು. ಆಗ ಸುಮಂಗಲೆಯರು ಬಂದು ವಧುಮಕ್ಕಳಿಗೆ ಅರಿಷಿಣ ಕುಂಕುಮ ಲೇಪಿಸಿ ಮಂಗಲ ಹಾಡಿದರು. ಆಗ ಶ್ರೀ ರೇವಣಸಿದ್ಧರು ಬಂದು

ದಂಪತಿಗಳಿಗೆ ಆಶೀರ್ವದಿಸಿ ಮಾಂಗಲ್ಯಧಾರಣ ಮಾಡಿದರು. ಆಗ್ಗೆ ಸರ್ವರೂ ಸಂತೋಷದಿಂದ ಅಕ್ಷತಾರೋಪಣ ಮಾಡಿ ಹರಿಸಿ ಜಯಘೋಷ ಮಾಡಿದರು. ವಿವಾಹ ಕಾರ್ಯ ಅತಿ ಸಂಭ್ರಮದಿಂದ ಜರುಗಿತು. ಮತ್ತು ಅಕ್ಕಮ್ಮ, ಬೀರೇಶ್ವರ, ಕನ್ಯೆಕೋಮಾಲಿಯವರು ಕೆಲವು ಕಾಲ ಸಂತೋಷದಿಂದ ಇರುತ್ತಿದ್ದರು.

## ಬೀರೇಶನು ಶಿಷ್ಯ ಮಾಳಿಂಗನನ್ನು ತರುವಿಕೆ.

ಅಂಥ ಸಮಯದಲ್ಲಿ ಹಿಂದಕ್ಕೆ ಈಶ್ವರನು ಹೇಳಿದಂತೆ ಒಬ್ಬ ಶಿಷ್ಯನು ಹುಟ್ಟುವನೆಂದು ಹೇಳಿದ್ದು ನೆನಸಿಗೆ ತಂದು ಶಿಷ್ಯನನ್ನು ಹುಡುಕುತ್ತಾ ಹೊರಟನು ಆಗ ಬಿಲ್ವಾಡಪುರದ ಅರಸು ತುಕ್ಕಪ್ಪನೆಂಬವನು ಮಹಾ ವೈಭವಶಾಲಿಯಾಗಿ ರಾಜ್ಯವಾಳುತ್ತಿದ್ದನು ಅವನ ಹೆಂಡತಿ ಕಾನಾಬಾಯಿಯ ಗರ್ಭದಲ್ಲಿ ವೀರ ಮಹಾಳಿಂಗನೆಂಬುವವನು ಹುಟ್ಟಿ ತ್ರಿಕಾಲಜ್ಞಾನಿಯೂ ಬ್ರಹ್ಮಚಾರಿಯೂ ಆಗಿದ್ದು ತನಗೆ ಒಬ್ಬ ದೇವಾಂಶದ ಗುರುವು ಬೇಕೆಂದು ಆಲೋಚನೆ ಮಾಡುತ್ತಿದ್ದನು. ಈ ವರ್ತಮಾನವು ಚರರ ಮುಖದಿಂದ ಬೀರೇಶ್ವರನಿಗೆ ತಿಳಿಯಿತು. ಆಗ ಬೀರೇಶನು ಬಿಲ್ವಾಡಪುರದ ಹಾದಿ ಹಿಡಿದು ಹೋದನು. ಅಲ್ಲಿ ಮಾರ್ಗದಲ್ಲಿ ಆ ಪಟ್ಟಣದ ಸಮೀಪದಲ್ಲಿ ಜಲಮಾಯಿದೇವಿಯ ಗುಡಿ ಇದ್ದು ಅತಿ ದೊಡ್ಡದೊಂದು ಜಲಮಾಯಿ ಕೆರೆ ಎಂಬುವದು ಇತ್ತು. ಅದನ್ನು ನೋಡಿ ಬೀರೇಶ್ವರನು ಜಲಮಾಯಿಗೆ ನಮಸ್ಕರಿಸಿ ಆ ಕೆರೆಯ ದಂಡೆಯ ಮೇಲೆ ಕುಳಿತನು. ಆಗ ಅರಸು ತುಕ್ಕಪ್ಪನ ಸಾವಿರಾರು ಕುರಿ ನೀರು ಕುಡಿಯಲಿಕ್ಕೆ ಚರರು ತಕ್ಕೊಂಡು ಬಂದರು. ಆಗ ದೇವಿಗೆ ನಮಸ್ಕಾರ ಮಾಡಿ ನನ್ನ ಕಾರ್ಯ ಜಯಿಸಿ ಶಿಷ್ಯನು ದೊರೆಯುವಂತೆ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸಿದನು. ಆಗ ಮಾಯಿಯು ನೀನು ಇಲ್ಲಿಯೇ ಇದ್ದು ಯಾವತ್ತು ಕುರಿಗಳನ್ನು ಮಾಯ ಮಾಡು, ನನ್ನ ವರದಿಂದ ಶಿಷ್ಯನು ದೊರಕುವನೆಂದು ಹೇಳಿದಳು. ಆಗ ಆ ಕುರಿಗಳನ್ನು ಮಾಯ ಮಾಡಿದನು. ಕುರಿ ಕಾಯುವ ಆಳುಗಳು ಗಾಬರಿಯಾಗಿ ಓಡಿ ಹೋಗಿ ತುಕ್ಕಪ್ಪನಿಗೆ ಹೇಳಿದರು. ಇದನ್ನು ಕೇಳಿ ಭಯಭ್ರಾಂತರಾಗಿ ತನ್ನ ರೈತರನ್ನೂ ಒಡ್ಡೋಲಗದ ಜನರನ್ನೂ ಕೂಡಿಕೊಂಡು ಬಂದು ನೋಡಲು ಕೆರೆ ದಂಡೆಯ ಮೇಲೆ ಕುಳಿತಿರುವವನು ಮಹಾ ಮಹಿಮನಿರುವನೆಂದು ತಿಳಿದು ಅವರಿಂದಲೇ ಈ ಕಾರ್ಯ ಆಗಿದೆ ಕಾರಣ ಅವರನ್ನೇ ಭಕ್ತಿಯಿಂದ ಪೂಜಿಸಿ

ಪಡೆಯಬೇಕೆಂದು ಆಲೋಚಿಸಿ ಆತನ ಪಾದಕ್ಕೆ ಬಿದ್ದು ಬೇಡಿಕೊಂಡರು. ಆವಾಗ್ಗೆ ಅವರನ್ನು ಮನ್ನಿಸಿ ಆಶೀರ್ವಾದ ಮಾಡಿ ಕುರಿಗಳನ್ನು ಹೊರಿಗೆ ಹೊರಡಿಸಿದನು. ಆಗ ತುಕ್ಕಪ್ಪನು ಹೇ ಮಹಾಮಹಿಮನೇ ಇಂಥ ಅಘಟಿತ ಕಾರ್ಯ ಮಾಡಿದ ಕಾರಣವೇನೆಂದು ಬಿನ್ನಹ ಮಾಡಿ ಕೇಳಿದನು. ಅದಕ್ಕೆ ಬೀರೇಶನು ಎಲೈ ಅರಸುಮಗನಾದ ತುಕ್ಕಪ್ಪನೇ ನಿನ್ನ ಹೆಂಡತಿ ಕಾನಾಬಾಯಿ ಉದರದಲ್ಲಿ ವೀರ ಮಹಾಳಿಂಗನು ಹುಟ್ಟಿರುವನು ಅವನು ಶಿಷ್ಯನಿರುವನು. ಅವನನ್ನು ನನಗೆ ಕೊಡಬೇಕು. ಅವನು ಮಹಾದೇವನಿಂದ ವರವು ಪಡೆದು ಹುಟ್ಟಿರುವನು. ಅವನು ತ್ರಿಕಾಲಜ್ಞಾನಿಯಾಗಿ ಬ್ರಹ್ಮಚರ್ಯದಿಂದ ಮೆರೆಯಬೇಕಾಗಿದೆ. ಸಂತೋಷದಿಂದ ಕೊಡು ಎಂದು ಕೇಳಲು ಅದಕ್ಕೆ ಒಪ್ಪಿ ನಿನ್ನಂಥ ಮಹಿಮನಾದ ನನ್ನ ಕುಲದೇವನೇ. ನಿನ್ನ ಅಪೇಕ್ಷೆಯಂತೆ ಕೊಡಲು ಒಪ್ಪಿ ಆಗ ಮಹಾಳಿಂಗನನ್ನು ಕರಕೊಂಡು ಬಂದು ಸರ್ವರಿಗೆ ಆಶೀರ್ವಾದ ಮಾಡಿಸಿದನು. ಆಗ ಅವರೆಲ್ಲರೂ ನಮ್ಮ ಕುಲದೇವನೆಂದು ಪೂಜಿಸಿ ವರ ಪಡೆದುಕೊಂಡರು ಮತ್ತು ತುಕ್ಕಪ್ಪನು ತನ್ನ ಅರಮನೆಗೆ ಕರಕೊಂಡು ಶ್ರೀ ಬೀರೇಶ್ವರನನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ಮೆರವಣಿಗೆಯಿಂದ ಕರೆತಂದು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಬಹು ಭಕ್ತಿ ಪರವಶನಾಗಿ ಪೂಜಿಸಿದನು. ಅಲ್ಲಿ ಯಾವತ್ತು ಶಿಷ್ಯರಿಗೆ ಧರ್ಮಬೋಧ ಮಾಡಿದನು. ಅಲ್ಲಿಂದ ತನ್ನ ನಿಜ ಶಿಷ್ಯನಾದ ಮಹಾಳಿಂಗನನ್ನು ಕರಕೊಂಡು ದೇಶ ಪರ್ಯಟನ ಮಾಡುತ್ತ ಬಿಲ್ವಾಡಪುರಕ್ಕೆ ಬಂದರು. ಆಗ ವೀರ ಮಹಾಳಿಂಗನನ್ನು ಕುರಿತು ಹೇ ದೇವನೇ ಹಾಲುಮತ ಕುರುಬರೆಂದರೆ ಯಾರು? ನೀನು ಇವರಿಗೆ ದೇವನಾಗಿ ನನ್ನನ್ನು ಕರೆದುಕೊಂಡು ಬಂದಿರುವಿ.

## ಶ್ರೀ ಬೀರೇಶನು ಹಾಲುಮತ ಕುರುಬರ ಉತ್ಪತ್ತಿ ಹೇಳಿದ್ದು.

ಇವರ ಪೂರ್ವಾಪರ ಹಕೀಕತ್ತನ್ನು ಹೇಳಬೇಕೆಂದು ಬೇಡಿಕೊಂಡನು. ಆಗ ಬೀರೇಶನು ಹೇಳಲಾರಂಭಿಸಿದನು ಏನಂದರೆ:— ಹೇ ಶಿಷ್ಯೋತ್ತಮನೇ ಶ್ರೀಮತ್ ಸೃಷ್ಟೀಶ ಸಮಸ್ತ ವರ್ಣಂಗಳು ಇಲ್ಲವೆಂದು ಸೂರ್ಯ, ಚಂದ್ರ ಅಷ್ಟತನಗಳು ಇಲ್ಲದೆಂದೂ ನಿರ್ಬಯಲವಾಗಿದ್ದಲ್ಲಿ ಅಖಂಡ ಸಚ್ಚಿದಾನಂದ

ಸತ್ಯಸ್ವರೂಪ ನಿಃಕ್ಕಲ ಲಿಂಗವು ಆ ಲಿಂಗಕ್ಕೆ ಜಗದುದ್ಭವದ ವಿಲಾಸದ ನೆನಹು ದೋರಲು ಆ ನೆನವಿನ ಮಂತ್ರದಿಂದ ತನ್ನ ಚಿತ್ತ ಪ್ರಭಾ ಸಮರ್ಥ ಶಕ್ತಿಯ ನ್ನು ಮುಂದುಗೊಂಡು ತೇಜೋಮೂರ್ತಿಯಪ್ಪ ಮಹಾಲಿಂಗ ಉದ್ಭವಿಸಿತು. ಆ ಮಹಾಲಿಂಗವೇ ಪಂಚಮುಖವನ್ನೈದು ಪಂಚಕಲಾಶಕ್ತಿ ಏಕವಾದ ಪರಶಿವ ನೆನಿಸಿದ ಆ ಪರಶಿವನ ನೆನಹು ಮಾತ್ರದಿಂದ ಅಷ್ಟ ತನುಗಳು ಪುಟ್ಟಿದವೆಂತೆಂ ದೊಡೆ ಆ ಪರಶಿವನ ಸದ್ಯೋಜಾತ ಮುಖದಲ್ಲಿ ಪೃಥ್ವಿ ಹುಟ್ಟಿತು. ವಾಮ ದೇವ ಮುಖದಲ್ಲಿ ಅಪ್ ಹುಟ್ಟಿತು. ಅಘೋರ ಮುಖದಲ್ಲಿ ಅಗ್ನಿ ಹುಟ್ಟಿತು. ತತ್ಪುರುಷ ಮುಖದಲ್ಲಿ ವಾಯು ಹುಟ್ಟಿತು. ಈಶಾನ್ಯದಲ್ಲಿ ಆಕಾಶ ಹುಟ್ಟಿತು. ಗೌಪ್ಯ ಮುಖದಲ್ಲಿ ಆತ್ಮ ಹುಟ್ಟಿತು ಮನದಲ್ಲಿ ಚಂದ್ರ ಹುಟ್ಟಿದನು. ನಯ ನದಲ್ಲಿ ಸೂರ್ಯ ಹುಟ್ಟಿದನು. ಈ ಪ್ರಕಾರ ಶಿವನಿಂದ ಅಷ್ಟ ತನುಗಳು ಹುಟ್ಟಿ ದವು ಅಷ್ಟ ತನು ಯುಕ್ತವಾದ ಬ್ರಹ್ಮಾಂಡ ವಿಸ್ತೀರ್ಣವೆಂತೆಂದೊಡೆ ಮೊದ ಲಲ್ಲಿ ವಿರಾಟ ಮೂರ್ತಿಯ ಪಾದ ಚೈತನ್ಯಪದದಲ್ಲಿ ವಾಯು, ಆ ವಾಯುವಿನ ಮೇಲೆ ಸುವರ್ಣಮಯವಾದ ಕಪ್ಪರ ಆ ಕಪ್ಪರದೊಳಗೆ ಒಂದು ಕೋಟಿ ಯೋಜನಾಂತರದಲ್ಲಿ ವಾರಿ ಪೂರಿತವಾಗಿದ್ದ ಕ್ಷೀರ ವರ್ಣದ ನೀರು ಆ ನೀರಿ ನಲ್ಲಿ ತಾವರೆಯ ಕಮಲ ಆ ಕಮಲದಲ್ಲಿ ನಿರ್ಮಿತವಾದ ಸಿಂಹ ಪೀಠ ಆ ಪೀಠದಲ್ಲಿ ಆಧಾರ ಶಕ್ತಿ ಮಂಡಿಸಿದ್ದಳು. ಆ ಶಕ್ತಿಯಲ್ಲಿ ಹೊಂದಾವರೆ ಅದರ ಮೇಲೆ ದಶಕೋಟಿ ಯೋಜನಾಂತರದ ಕೂರ್ಮನಿಹನು. ಆ ಕೂರ್ಮನ ಬೆನ್ನಿನಲ್ಲಿ ಪರಮೈಶ್ವರ್ಯ ಸಂಪನ್ನತೆಯಿಂದ ನೆಲೆಸಿದ್ದ ಮಹಾಶೇಷ ಒಂದೊಂ ದು ಹೆಡೆ ಯೋಜನದಗಲವು. ಇಂಥ ಹೆಡೆ ಸಾವಿರಂಗಳಿಂದ ಒಪ್ಪುವದು. ಇಂತಪ್ಪ ಫಣಿರಾಜನ ಫಣಾಮಣಿಯ ಮೇಲೆ ಸರ್ವ ಆಧಾರಮಪ್ಪ ಅಂಡಮಂ ನೆಲೆಗೊಳಿಸಿದ ಈಶ್ವರನು ಇಂತಪ್ಪ ಅಜಾಂಡಮಂ ನಾನೇ ರಚನೆ ಮಾಡಿದರೆ ಸೇವ ಸೇವಕತ್ವ ಒಡೆಯ ಭಂಟತ್ವವಿಲ್ಲದೆ ಹೋಗುವದೆಂದು ತನ್ನ ರಜಸ್ಸಹಂ ಕಾರದಿಂದೆಸೆಯಲು ಶುದ್ಧ ಕಂಜನಾದ ಬ್ರಹ್ಮನುದಿಸಿದನು. ಆ ಬ್ರಹ್ಮನು ಶಿವಾಜ್ಞೆ ಪಡೆದು ಬ್ರಹ್ಮಾಂಡವನ್ನು ಹುಟ್ಟಿಸಿದನು. ಈ ಉದ್ಭವವಾದ ಬ್ರಹ್ಮಾಂಡ ನೋಡುವದಕ್ಕೆ ಶ್ರೀಹರನು ಗಿರಿಜೆಯನ್ನೊಡಗೊಂಡು ಬಂದು ಅಲ್ಲಿ ದಿವ್ಯವಾದ ಸ್ಥಾನವನ್ನು ನೋಡಿ ವಿಶ್ರಾಂತಿಗಾಗಿ ಕುಳಿತುಕೊಂಡರು. ಈ

ಯಾವತ್ತೂ ಬ್ರಹ್ಮಾಂಡ ನೋಡಿ ಆನಂದಭರಿತರಾಗಿರಲು ಶ್ರೀ ಪರಮೇಶ್ವರನು ಸ್ವಲ್ಪ ನಿದ್ರಾಲೋಲುಪ್ತನಾದನು. ಈ ಆನಂದದಾಯಕವಾದದ್ದನ್ನು ನೋಡಿ ಶ್ರೀ ಪಾರ್ವತಿಯ ಮೊಲೆಗಳು ಒಮ್ಮಿಂದೊಮ್ಮೆ ತೊರೆದು ಹಾಲು ಚಿಮ್ಮಿ ಭೂಮಿಗೆ ಬೀಳಹತ್ತಲು ಬಲದ ಮೊಲೆಯ ಹಾಲನ್ನು ಮಣ್ಣಿನಲ್ಲಿ ಕಲಿಸಿ ಗಂಡು ರೂಪವನ್ನು ಮಾಡಿದಳು. ಎಡದ ಮೊಲೆಯ ಹಾಲನ್ನು ಕಲಿಸಿ ಹೆಣ್ಣು ನಿರ್ಮಿಸಿದಳು. ಹೀಗೆ ಮಾಡುವಷ್ಟರಲ್ಲಿ ಶ್ರೀ ಶಿವನು ಎಚ್ಚತ್ತು ಇದು ಏನೆಂದು ಕೇಳಲಾಗಿ ಹೇ ದೇವಾ ಈ ಉಭಯ ಪ್ರತಿಬಿಂಬಗಳು ಆಡಿಗೆ ಬೇಕೆಂದು ಬಿನ್ನವಿಸಿದಳು. ಅದನ್ನು ಕೇಳಿ ಶ್ರೀ ಶಂಕರನು ಅವರಿಗೆ ಪ್ರಾಣವಿತ್ತು ಗಂಡು ಕೂಸಿಗೆ ಮುದ್ದಪ್ಪನೆಂತಲೂ ಹೆಣ್ಣು ಕೂಸಿಗೆ ಮುದ್ದವ್ವನೆಂತಲೂ ನಾಮಕರಣವಿತ್ತು ನೀವು ಪೃಥ್ವಿಯಲ್ಲಿ ಪಶುಪಾಲನ ವೃತ್ತಿಯನ್ನು ಕೈಕೊಳ್ಳಬೇಕು. ಮತ್ತು ಭೂಮಿಗೆ ಒಡೆಯರಾಗಿ ಬೀಜ ಬಿತ್ತಿ ಬೆಳೆದು ಸರ್ವ ಪ್ರಾಣಿಗಳನ್ನು ಸಂರಕ್ಷಿಸಬೇಕು. ಎಂದು ಆ ಎರಡೂ ಗೊಂಬೆಗಳನ್ನು ಸತಿ ಪತಿಗಳನ್ನಾಗಿ ಮಾಡಿ ಶಿವನು ಕೈಲಾಸಕ್ಕೆ ಹೋದನು. ಕೆಲವು ದಿವಸಗಳು ಗತಿಸಲು ಆ ದಂಪತಿಗಳಿಗೆ ಆದಿಗೊಂಡನೆಂಬ ಓರ್ವ ಕಂದನು ಜನಿಸಿದನು. ಅವನು ಆದಮ್ಮನೆಂಬ ಸ್ತ್ರೀಯನ್ನು ಲಗ್ನ ಮಾಡಿಕೊಂಡನು. ಆಕೆಯ ಉದರದಲ್ಲಿ ಆರು ಮಂದಿ ಮಕ್ಕಳು ಹುಟ್ಟಿದರು. ಅವರ ಹೆಸರುಗಳು ಅನುಕ್ರಮವಾಗಿ (೧) ಅಮರಗೊಂಡ (೨) ಶಿವಗೊಂಡ (೩) ಬೀರಗೊಂಡ (೪) ಮಹಾದೇವಗೊಂಡ (೫) ಮುದ್ದುಗೊಂಡ (೬) ಕಡೆ ಹುಟ್ಟಿದ ಪದ್ಮಗೊಂಡ ಹೀಗೆ ಇದ್ದು ಅವರು ಪ್ರೌಢವಯಲ್ಲಿ ಸಪಗರದಿಂದ ಬಾಳುತ್ತಿರಲು ಪದ್ಮಗೊಂಡನ ಸಂತತಿಯ ಸುತರು ನಾಲ್ವತ್ತು ಗೋತ್ರಜರಾಗಿ ಮೆರೆಯುತ್ತಿರುವರು. ಅವರು ಗೌರಿಯ ಮೊಲೆ ಹಾಲಿನಿಂದ ಹುಟ್ಟಿದ್ದರಿಂದ ಹಾಲುಮತದವರೆಂದು ಪ್ರಥಮ ಸತ್ಕಾರ್ಯಗಳಲ್ಲಿ ಸರ್ವ ಜನರಲ್ಲಿ ಯೋಗ್ಯರೆಂದು ಮಾನ್ಯತೆ ಪಡೆದಿರುವರು. ಇದನ್ನು ಶಂಕರನಿಂದ ಕೇಳಿದ್ದನ್ನು ನಿನಗೆ ಶಿಷ್ಯನಾದ ಮಹಾಲಿಂಗನಿಗೆ ಬೀರೇಶನು ತಿಳಿಸಿದನು. ಆಗ ಮಹಾಲಿಂಗನು ಕೇಳಿ ಸಂತೋಷಭರಿತನಾಗಿ ಬೀರೇಶ್ವರನನ್ನು ಕುರಿತು ಪ್ರಶ್ನೆ ಮಾಡಿದ್ದೇನೆಂದರೆ ಕುರಿಗಳು ಯಾವಾಗ ಹುಟ್ಟಿದವು. ಅವು ಕುರುಬರಿಗೆ ಹೇಗೆ ದೊರೆತವು? ಅದನ್ನು ಸವಿಸ್ತಾರವಾಗಿ ಹೇಳಬೇಕೆಂದು ಬೇಡಿಕೊಳ್ಳುವೆನು.

# ಕುರಿಗಳ ಉತ್ಪತ್ತಿ.

ಶಿಷ್ಯ ಮಹಾಲಿಂಗನೇ ಕೇಳು:— ಒಂದು ದಿನ ಪರಮೇಶ್ವರನ ಓಲಗದಲ್ಲಿ ಇಂದ್ರ, ಹರಿ, ಬ್ರಹ್ಮ ಯಾವತ್ತೂ ಸುರಮುನಿಗಳು ಕೂತಿರಲು ಆ ಸಭೆಗೆ ಭೃಂಗೀಶ ಬಂದು ನಾಟ್ಯ ಮಾಡಿದನು. ನಾಟ್ಯ ಮುಗಿದ ಮೇಲೆ ಈಶ್ವರನಿಗೆ ಒಂದೇ ಕೈಯಿಂದ ನಮಸ್ಕಾರ ಮಾಡಿದನು. ಇದು ಗಿರಿಜೆಗೆ ಸಹನವಾಗದೆ ಅವಳು ಈಶ್ವರನಿಗೆ ಭೃಂಗಿಯು ಒಂದೇ ಕೈಯಿಂದ ಏಕೆ ನಮಸ್ಕಾರ ಮಾಡಿದನು ಎಂದು ಕೇಳಿದಳು. ಅದಕ್ಕೆ ಶಿವನು ಅಂದದ್ದು— ವೀರ ಪುರಾತನರ ಕಾರಣ. ಬೇರೆ ಏನಿರುವದು ನನಗೆ ತಿಳಿಯದು ನೀನೇ ಕೇಳು ಅಂದನು. ಆಗ ಗಿರಿಜೆಯು ಎಲೋ ಭೃಂಗೀಶ ನಿನಗೆ ಎರಡು ಕೈಗಳಿರಲು ಒಂದೇ ಕೈಯಿಂದ ಭಾನುಶೇಖರನಿಗೆ ಶರಣು ಮಾಡಿದ ಕಾರಣವೇನು ? ಎಂದು ಕೇಳಿದಳು ಅದಕ್ಕೆ ಭೃಂಗೀಶ ಅಂದದ್ದು— ಹಡೆದ ತಾಯಿಯೇ ಕೇಳು. ಮೃಡನೊಬ್ಬನಲ್ಲದೆ ಅನ್ಯರನ್ನು ಲೆಕ್ಕಿಸದೆ ಒಡೆಯನೊಬ್ಬನೇ ಜಗಕೆ ಧೃಡನೆಂದು ಶರಣು ಮಾಡಿದೆನು ಅಂದನು. ಅದಕ್ಕೆ ಗಿರಿಜೆಯು ಎಲೋ ಭೃಂಗೀ ಬ್ರಹ್ಮ, ಹರಿ ಇಂದ್ರರು ನಮ್ಮವರಲ್ಲನೆಂದು ಹೆಮ್ಮೆಯ ಮಾತಾಡಿದರೆ ನಮ್ಮ ಶಕ್ತಿಯು ನಿನ್ನ ಅಂಗದಲ್ಲಿ ಇಲ್ಲವೇ ಎಂದು ಅಂದಳು. ಅದಕ್ಕೆ ಭೃಂಗಿಯು ತನ್ನ ಮೈದೊಗಲನ್ನು ಕಿತ್ತೊಗೆದು ಬರೇ ಎಲುಬಿನ ಶರೀರದಿಂದಲೇ ಪರಮೇಶ್ವರನೆದುರು ಸಭೆಯಲ್ಲಿ ನಿಂತನು. ಆಗ ಪಾರ್ವತಿಯು ಈತನು ನನ್ನ ಶಕ್ತಿಯನ್ನು ಕಿತ್ತೊಗೆದು ಅಸ್ಥಿಪಂಜರವಲ್ಲಿಯೇ ನಿಂತನೆಂದು ಭೂತಳದ ವಾಯುನಾಥನನ್ನು ಇವನ ಮೇಲೆ ತೂರಿದಳು. ಆದರೂ ಭೃಂಗಿಯು ಹಾಗೆಯೇ ನಿಂತಿದ್ದನು. ಇದನ್ನು ಕಂಡು ಗಿರಿಜೆಯು ಕೊರವಂಜಿ ವೇಷ ತಾಳಿ ಪಾತಾಳಕ್ಕೆ ಹೋಗಿ ಆದಿಶೇಷನ ಮುಂದೆ ನಾದ ಸ್ವರಗಳ ಮಾಡಿ ನಲಿದಾಡಿ ಅವನನ್ನು ಮೆಚ್ಚಿಸಿ ಅವನಿಂದ ಚೈತ್ರದ ವಾಯುವನ್ನು ತಂದು ಭೃಂಗಿಯ ಮೇಲೆ ಬಿಡಲು ಗುಡಗುಡಿಸುತ್ತ ಚೈತ್ರದ ಗಾಳಿಯು ಭೃಂಗಿಯನ್ನು ಹಾರಿಸಬೇಕೆನ್ನುವಷ್ಟರಲ್ಲಿ ಪರಮೇಶ್ವರನು ಭೃಂಗಿಗೆ ತ್ರಿಶೂಲ ಕೊಡಲು ಆ ತ್ರಿಶೂಲವನ್ನು ಊರಿಕೊಂಡು ಭೃಂಗಿಯು ನಿಂತಲ್ಲೇ ನಿಂತುಬಿಟ್ಟನು. ಭೃಂಗಿಯು ಹೀಗೆ ನಿಂತದ್ದು ನೋಡಿ ಗಿರಿಜೆಯು ಕಂಗೆಟ್ಟು ನಾಚುತ್ತ ಮೈಮೇಲಿನ ಅರಿವೆಯ ಪರಿವೆ ಇರದೆ ಭೂಮಿಗೆ ಇಳಿಯ

ಹೆತ್ತಲು ಗಂಗಾಧರನು ಹೋಗಿ ಕೈ ಹಿಡಿದು ಕರೆದನು. ಈ ಪರಮ ರಹಸ್ಯ ನೋಡಿ ಗರುಡ, ಗಂಧರ್ವ, ಕಿನ್ನರರು, ವಿದ್ಯಾಧರರು ನಗಹತ್ತಿದರು ಆಗ ಅತಿ ಸಿಟ್ಟಾಗಿ ಪಾರ್ವತಿಯು ನೀವೆಲ್ಲರೂ ಸತ್ತುಹೋಗಿ ಕುರಿಯ ಜನ್ಮ ತಾಳಿರಿ. ಎಂದು ಅವರಿಗೆ ಶಾಪ ಕೊಟ್ಟಳು. ಮತ್ತು ಮುಂದೆ ನಕ್ಕವರು ಕುರಿಗಳಾಗ ಬೇಕು. ಹಿಂದೆ ನಕ್ಕವರು ಆಡುಗಳಾಗಬೇಕು ಎಂದು ಅಂದಳು. ಅದರಂತೆ ಅವರೆಲ್ಲರೂ ಕುರಿಗಳಾಗಿ ದೇವ ಸಭೆಯಲ್ಲಿ ನಿಂತರು. ಆಗ ಪಾರ್ವತಿ ಪರಮೇ ಶ್ವರರೀರ್ವರೂ ಕದಳೀ ಫಲಗಳನ್ನು ತಕ್ಕೊಂಡು ಆ ಕುರಿಗಳಿಗೆ ಚೀ, ಚೀ, ಎಂದು ಕರೆಯಲು ಅವು ಹೆದರದೆ ಬರಹತ್ತಿದವು. ಇದನ್ನು ಗಣಪತಿ, ವೀರಭದ್ರ ಪರಪ್ರಮಥರು ನೋಡಿ ಬೆರಗಾದರು. ಆಗ ಈಶ್ವರನು ಮಾಧವ ಬ್ರಹ್ಮ ಮೊದಲಾದವರಿಗೆ ಒಂದೊಂದು ದಿನ ಕುರಿಗಳನ್ನೆಲ್ಲ ಕಾಯ್ದು ತರಬೇ ಕೆಂದು ಅಪ್ಪಣೆ ಮಾಡಿದನು. ಈ ಪ್ರಕಾರ ದೇವ ಸಭೆಯವರು ಕಾಯುತ್ತಿ ರಲು ಪರಮೇಶ್ವರನು ಕಾಯುವ ಸರತಿ ಬಂದಿತು. ಆಗ ಅವನು ಪಾರ್ವತಿಗೆ ಅಂಬಲಿ ತಕ್ಕೊಂಡು ಬರಲು ಹೇಳಿ ತಾನು ಕುರಿಯ ಹಿಂಡು ತಕ್ಕೊಂಡು ಭೂತ ಳಕ್ಕೆ ಬಂದನು. ಹೀಗೆ ಪರಮೇಶ್ವರನು ಕುರಿಗಳನ್ನು ಕಾಯುತ್ತಿರಲು ಪಾರ್ವ ತಾದೇವಿಯು ಅಂಬಲಿಯನ್ನು ತಕ್ಕೊಂಡು ಅಲ್ಲಿಗೆ ಬಂದಳು. ಮತ್ತು ಪರ ಮೇಶ್ವರನಿಗೆ ಊಟಕ್ಕೆ ನೀಡಿದಳು. ಸತಿ ಪತಿಗಳಿಬ್ಬರೂ ಹರುಷದಿಂದ ಉಂಡರು. ಆಗ ಪರಮೇಶ್ವರನು ಪಾರ್ವತಿಗೆ ಒಂದು ಸಂಗತಿಯನ್ನು ಸೂಚಿ ಸಿದನು. ಅದು ಏನಂದರೆ:— ನಾನು ಈ ನಾಡಲ್ಲಿ ಇರುವ ತವಾಮ್ಮ ಪುರವೆಂಬ ಊರ ಗೌಡನಾದ ಆದಿಗೊಂಡನ ಬಳಿಗೆ ಹೋಗಿ ಭೂಮಿಯ ದಾನವನ್ನು ಬೇಡು ವೆನು. ಹೀಗೆಂದು ದೋಮಯ ಸುಟ್ಟು ಅದರ ಭಸ್ಮ ಧರಿಸಿಕೊಂತು ಕೈಯ ಲ್ಲಿ ಕಪ್ಪರ ಹಿಡಕೊಂಡು ತಲೆಯಲ್ಲಿ ಕಿರಿಜಡೆಗಳನ್ನಿಟ್ಟುಕೊಂಡು ಕರಿಯ ಕಂಬಳಿ ಹುಲಿಯ ಚರ್ಮ ತಕ್ಕೊಂಡು ಹಾವಿನ ಆಭರಣ ಮಾಡಿಕೊಂಡು ಜಂಗುಗಳನ್ನು ಕಟ್ಟಿಕೊಂಡು ತ್ರಿಶೂಲ ಹಿಡಕೊಂಡು ಆದಿಗೊಂಡನ ಬಳಿಗೆ ಹೋಗಿ ಐದು ಮೊಳದಷ್ಟು ಭೂಮಿಯ ದಾನವನ್ನು ಬೇಡಿದನು. ಗುರುವಿ ನ ಬೇಡಿಕೆಯಂತೆ ಗೌಡನು ಭೂಮಿ ದಾನವನ್ನು ಕೊಟ್ಟನು. ಆಗ ಈಶ್ವ ರನು ತನ್ನ ಕೈಯಲ್ಲಿ ತ್ರಿಶೂಲದಿಂದ ಅಗಿದು ಗುಹೆಯ ಮಾಡಿದನು. ಆಗ

ಕುರಿಯ ಹಿಂಡನ್ನು ತಂದು ಆ ಗವಿಯಲ್ಲಿ ಹೊಗಿಸಿ ಅದರ ಮೇಲೆ ತಾನು ಹೊತ್ತಿರ್ದ ಕಂತ್ರಿಯನು ಮುಚ್ಚಿ ಬಾಗಿಲಕ್ಕೆ ಪಾರ್ವತಿಯ ಮುಖರೆಯಿಂದ ಮುದ್ರೆ ಹಾಕಿದನು. ಮುಚ್ಚಿದ ಕಂತ್ರಿಯ ಮೇಲೆ ಹುತ್ತ ಬೆಳೆದು ಗಿರಿಜೆಯ ಮುಖರೆ ಬೆಳೆದು ಮುತ್ತಲದ ಮರವಾಯಿತು. ಹೀಗೆ ಕುರಿ ಹಿಂಡು ಅಡಗಿಸಿ ಇಟ್ಟು ಆದಿಗೊಂಡನಿಗೆ ಆಶೀರ್ವಾದ ಮಾಡಿ ಈ ಕುರಿಗಳು ನಿನ್ನ ಉದರದಲ್ಲಿ ಹುಟ್ಟಿದ ಪದ್ಮಗೊಂಡನಿಗೆ ವಶವಾಗಿ ಕಾಪಾಡಲೆಂದು ಅವನ ವಂಶದಲ್ಲಿ ಹುಟ್ಟಿದವರೆಲ್ಲರು ಕುರಿ ಕಾಯ್ದು ಕುರುಬರು ಆಗಲಿ ಅಂತಾ ಹೇಳಿ ಶಿವ ಪಾರ್ವತಿ ಹೋದರು. ಆದರಿಂದ ಕುರಿ ಕಾಯುವವರಿಂದ ಕುರುಬರೆಂದು ಹೆಸರು ಬಂತು. ಮತ್ತು ಪಶುಪಾಲನ ಮಾಡಿದಿಂದ ಶ್ರೀಮಂತರಾದ ಇವರಿಗೆ ಧನ ಅಂದರೆ ದ್ರವ್ಯ ಘರ್ ಅಂದರೆ ಮನೆ ಎಂಬುವದಾಗಿ ಇದ್ದುದರಿಂದ ಧನಗರರೆಂಬ ನಾಮವು ಮಹಾರಾಷ್ಟ್ರದಲ್ಲಿ ರೂಢಿಯಾಯಿತು. ನಾನು ಶಿವನಿಂದ ಕೇಳಿದ್ದನ್ನು ಹೇಳಿದೆನು

## ವೀರಗೊಲ್ಲಾಳನ ಚರಿತ್ರೆ.

ಅನ್ನಲು ಆಗ ಶಿಷ್ಯ ಮಹಾಲಿಂಗನು ಪರಮಾನಂದಭರಿತನಾಗಿ ಹೇ ಮಹಾಪ್ರಭೋ ನೀನು ಈ ಕುಲಕ್ಕೆ ದೇವರಾಗಿ ಬಂದು ಉದ್ಧಾರ ಮಾಡಿ ಪುನೀತರನ್ನು ಮಾಡಿದ್ದು ನಿಜ. ಇವರಲ್ಲಿ ದೃಢಭಕ್ತಿಯಿಂದ ದೇವರನ್ನು ಮೆಚ್ಚಿ ನಡೆದವರ ಚರಿತ್ರೆಯನ್ನು ಹೇಳಬೇಕೆಂದು ಬೇಡಿಕೊಂಡನು. ಆಗ ಬೀರೇಶ್ವರನು ಹೇ ಮಹಾಲಿಂಗನೇ ಕೇಳು ಒಳ್ಳೇ ಪ್ರಶ್ನೆ ಮಾಡಿದಿ. ಹಿಂದಕ್ಕೆ ವೀರಗೊಲ್ಲಾಳನೆಂಬವನು ಲಿಂಗಪ್ರತಿಷ್ಟೆ ಮಾಡಿ ಗಣಪದವಿ ಹೊಂದಿದ್ದು ಹೇಳುವೆನು ಕೇಳು. ಏನೆಂದರೆ— ಅಡವಿಯಲ್ಲಿ ಕುರಿ ಕಾಯುತ್ತ ವೀರಗೊಲ್ಲಾಳನು ಇರಲು ಅವಾಗ್ಗೆ ಎಷ್ಟೋ ಜನ ಭಕ್ತಮಹೇಶ್ವರರು ಶ್ರೀಶೈಲ ಗಿರಿಗೆ ಶಿವರಾತ್ರಿಯ ಯಾತ್ರೆಗೆ ಚಾಂಗು ಭಲೀರೆ ಉಘೇ ಎಂದೂ ಹರ ಹರ ಮಹಾದೇವನೆಂದು ನಾಮಸ್ಮರಣೆ ಮಾಡುತ್ತಾ ಹೊರಟಿದ್ದರು. ಅವರನ್ನು ನೋಡಿ ಅವರ ಹತ್ತಿರ ಹೋಗಿ ನೀವು ಎಲ್ಲಿಗೆ ಹೋಗುತ್ತೀರಿ ಎಂದು ವೀರಗೊಲ್ಲಾಳನು ಭಕ್ತಿಯಿಂದ ಕೇಳಿದನು. ಆಗ ಯಾತ್ರಿಕರಲ್ಲಿ ಒಬ್ಬನು ನಾವು ಶ್ರೀಗಿರಿಮಲ್ಲೇಶನಾದ ಜ್ಯೋತಿರ್ಲಿಂಗಕ್ಕೆ ಹೋಗಿ ಅಲ್ಲಿ ಪಾತಾಳ ಗಂಗೆಯ ಉದಕದಲ್ಲಿ ಸ್ನಾನ ಮಾಡಿ ಜ್ಯೋತಿರ್ಲಿಂಗದ ಪೂಜಾ ತೀರಿಸಿಕೊಂಡು ಬರುವೆವು. ಮತ್ತು ಅಲ್ಲಿಂದ

ಲಿಂಗಗಳನ್ನು ತರುವೆವು. ಅಂತಾ ಹೇಳಿದನು. ಅದನ್ನು ಕೇಳಿ ಆ ಲಿಂಗದ ಪೂಜೆ ಮಾಡಿದರೆ ಏನು ದೊರೆಯುವದು. ಅಂತಾ ವೀರಗೊಲ್ಲಾಳನು ಕೇಳಿದನು. ಎಲೈ ಮಗನೇ ಕೇಳು. ಅಲ್ಲಿಂದ ತಂದ ಲಿಂಗಪೂಜೆಯು ಧೃಡಭಕ್ತಿಯಿಂದ ಪೂಜೆ ಮಾಡಿದರೆ ಸಕಲ ಅಷ್ಟೈಶ್ವರ್ಯ ಪ್ರಾಪ್ತವಾಗಿ ಜ್ಞಾನವು ಸಿದ್ಧಿಸಿ ಮೋಕ್ಷದ ಗಣಪದವಿ ದೊರಕುವದು. ಅಂತಾ ಆ ಯಾತ್ರಿಕನಾದ ಜಂಗಮನು ಹೇಳಲು ಆಗ ಆ ವೀರಗೊಲ್ಲಾಳನು ಲಿಂಗಪೂಜೆ ಮಾಡಬೇಕೆಂದು ಅವನು ಮನದಲ್ಲಿ ನಿಶ್ಚಯ ಮಾಡಿ ಹೇ ಮಹಾನುಭಾವನೇ ನನಗೆ ಒಂದು ಲಿಂಗ ತಂದುಕೊಟ್ಟರೆ ಬಿಂದಿಗಿ ಹೊನ್ನ ಕೊಡುವೆನೆಂದು ಹೇಳಿದನು. ಅದನ್ನು ಕೇಳಿ ಯಾತ್ರಿಕನು ನಿನ್ನ ಅಪೇಕ್ಷೆಯಂತೆ ಲಿಂಗ ತರುವೆನು. ಹೊನ್ನು ತುಂಬಿದ ಬಿಂದಿಗೆಯನ್ನು ಈಗಲೇ ಕೊಡು ಅಂತಾ ಕೇಳಿದನು. ಅದಕ್ಕೆ ಒಪ್ಪಿ ವೀರಮಾಳಿಂಗನು ತನ್ನ ದಡ್ಡಿಯಲ್ಲಿ ಹೂಳಿಟ್ಟ ಹೊನ್ನಿನ ಬಿಂದಿಗಿಯನ್ನು ಕೊಟ್ಟು ಕಳುಹಿದನು. ಆ ಜಂಗಮನು ಅತಿ ಸಂತೋಷದಿಂದ ತಕ್ಕೊಂಡು ಹೊರಟು ಹೋದನು. ಆಗ ವೀರ ಗೊಲ್ಲಾಳನು ತನ್ನ ಕುರಿಗಳನ್ನು ಆಳುಗಳಿಗೆ ಕಾಯಲಿಕ್ಕೆಹಚ್ಚಿದನು. ತಾನು ಆ ಗುಡ್ಡದ ಮಾರ್ಗದಲ್ಲಿ ನಿಂತು ಆ ಜಂಗಮನು ಯಾವಾಗ್ಗೆ ಬರುವನೋ ಲಿಂಗಪೂಜೆಯನ್ನು ಎಂದು ಮಾಡುವೆನೋ ಎಂದು ಮನದಲ್ಲಿ ಆಲೋಚಿಸುತ್ತ ಗದ್ದಕ್ಕೆ ಕೋಲು ಊರಿಕೊಂಡು ಜಂಗಮನ ಹಾದಿ ನೋಡುತ್ತ ನಿಂತುಕೊಂಡೇಬಿಟ್ಟನು. ಆ ವೇಳೆಯಲ್ಲಿ ಶ್ರೀಶೈಲ ಗಿರಿಯಿಂದ ತಮ್ಮ ಪೂಜಾ ತೀರಿಸಿಕೊಂಡು ಯಾತ್ರೆಯ ಕೆಲಸ ತೀರಿಸಿಕೊಂಡು ಗಡಿಬಿಡಿಯಿಂದ ಹಾದೀ ಹಿಡಿದು ಬರಹತ್ತಿರುವರು. ಅದೇ ಮಾರ್ಗದಲ್ಲಿ ನಿಂತಿರುವ ವೀರಗೊಲ್ಲಾಳನನ್ನು ನೋಡಿ ಬಿಂದಿಗಿ ಹೊನ್ನು ತಕ್ಕೊಂಡು ಹೋದ ಜಂಗಮನು ಹೊನ್ನು ಸಿಕ್ಕಿತೆಂಬ ಭರದಲ್ಲಿ ಲಿಂಗ ಮರೆತು ಬಂದಿದ್ದನು. ಈ ಹಾದಿಯಲ್ಲಿ ನಿಂತ ವೀರಗೊಲ್ಲಾಳನನ್ನು ಕಂಡ ಕೂಡಲೆ ಗಾಬರಿಯಾಗಿ ಏನು ಮಾಡಬೇಕೆಂದು ಆಲೋಚಿಸಿ ಹಾದಿಯಲ್ಲಿ ಬಿದ್ದಿರುವ ಒಂದು ಕುರಿ ಹಿಕ್ಕೆಯನ್ನು ತಕ್ಕೊಂಡು ಒಂದು ಅವನ ಕೈಯಲ್ಲಿ ಕೊಟ್ಟನು. ಇದನ್ನು ಯಾರಿಗೂ ತೋರಿಸದಂತೆ ಗುಪ್ತದಿಂದ ಇಟ್ಟು ಪೂಜಿಸಿ ಹಾಲು ನೈವೇದ್ಯ ಮಾಡಿ ಎಸಿಯೆಂದು ಹೇಳಿದನು. ಅದರಂತೆ ವೀರಗೊಲ್ಲಾಳನು ತನ್ನ ಕುರಿಗಳ ಹಿಕ್ಕಿಯ ಗೊಬ್ಬರದಲ್ಲಿ ಪೂಜೆ ಮಾಡಿ ಹಾಲು ಎರೆಯಹತ್ತಿದನು. ದಿನಾ

ಲು ಧೃಡಭಕ್ತಿಯಿಂದ ಹೂವು ಪತ್ರಿಗಳನ್ನು ಎತ್ತಿ ತನ್ನ ಕುರಿ ಹಿಂಡಿನಲ್ಲಿ ಬಂದ ಹಾಲನ್ನು ಕೊಡಗಟ್ಲೆ ತಂದು ಹಾಕಿ ನನ್ನ ದೇವನು ಹಸಿದುಬಂದಿರುವನೆಂದು ಭಕ್ತಿಯಿಂದ ಹಾಲು ಎರೆಯುತ್ತಿದ್ದನು. ಇದರಂತೆ ದಿನಾಲು ಮಾಡುತ್ತಿರಲು ಮನೆಗೆ ಹಾಲು ತಾರದೆ ಊಟಕ್ಕೂ ಬಾರದೆ ಇದ್ದುದರಿಂದ ಆವನ ತಂದೆಯು ಬಂದು ನೋಡಲು ಅತಿ ಸೋಜಿಗವಾಗಿ ಎಲೋ ಮಗನೇ ನೀನೇನು ಮಾಡುವಿ ಹುಚ್ಚಾ. ಗೊಬ್ಬರಕ್ಕೆ ಹಾಲು ಹಾಕುತ್ತಿಯಲ್ಲಾ ಎಂದು ಬೆದರಿಸಿ ಕೇಳಿದನು. ಆದಕ್ಕೆ ಮಗನು ಅಂದದ್ದು:— ತಂದೆಯೇ ನನಗೆ ಶ್ರೀಶೈಲದಿಂದ ಒಬ್ಬ ಗುರುವು ಬಂದು ಲಿಂಗ ಕೊಟ್ಟು ಪೂಜಿಸಿ ಪಾಲಿಸಿದು ದೃಢ ಭಕ್ತಿಯಿಂದ ನಡೆದರೆ ಶಿವನು ಒಲಿದು ಅಷ್ಟೈಶ್ವರ್ಯ ಕೊಡುವನೆಂದು ಹೇಳಿದಂತೆ ಈ ಲಿಂಗಕ್ಕೆ ಹಾಲು ಎರೆಯುತ್ತಿರುವೆನು. ಅಂತ ಹೇಳಿದನು. ಆದನ್ನು ಕೇಳಿ ಆ ಚಂಡೇಶನಿಗೆ ಆತಿಸಿಟ್ಟು ಬಂದು ಆ ಲಿಂಗವೆಲ್ಲಿರುವದು? ಏನು ಹುಚ್ಚನೇ ಹಿಂಡಿದಹಾಲು ವ್ಯರ್ಥವಾಗಿ ಕಳೆಯುತ್ತಿರುವೆಯಲ್ಲಾ! ಎಂದುಗರ್ಜಿಸಿದನು. ವೀರಬಲ್ಲಾಳನು ತಂದೆಯ ಮಾತಿನ ಕಡೆಗೆ ಲಕ್ಷ್ಯ ಕೊಡದೆ ದೃಢನಿಶ್ಚಯದಿಂದ ಪೂಜೆಯಲ್ಲಿಯೇ ಲೀನನಾಗಿ ಕುಳಿತು ನನ್ನ ಪೂಜೆಯನ್ನು ಕೆಡಿಸಬೇಡ ಹೋಗು ಎಂದು ಧಿಕ್ಕರಿಸಿದನು. ಆದಕ್ಕೆ ಚಂಡೇಶನು ಬೈಯುತ್ತ ಲಿಂಗವಿಟ್ಟ ಆ ಗೊಬ್ಬರವನ್ನು ಸೂರೆ ಮಾಡಿ ಲಿಂಗಕ್ಕೆ ತನ್ನ ಎಕ್ಕಡದ ಕಾಲಿನಿಂದ ಒದೆಯಲು ಮಗನು ಹೀಗೆ ಮಾಡಿದ್ದನ್ನು ಸಹಿಸದೆ ಅತಿ ಸಿಟ್ಟಿಗೆದ್ದು ಎಡ ಬಲದಲ್ಲಿ ನೋಡಿ ತನ್ನ ಕೊಡ್ಲಿಯನ್ನು ತಕ್ಕೊಂಡು ತಂದೆಯ ಶಿರವನ್ನು ಕಡಿದು ಬಿಸಾಟಿದನು. ಇದನ್ನು ಶಿವನು ಅರಿತು ಈತನ ವೀರ ಭಕ್ತಿಗೆ ಮೆಚ್ಚಿ ಆ ಕುರಿ ಹಿಕ್ಕಿಯಲ್ಲಿಯೇ ಲಿಂಗೋದ್ಭವನಾಗಿ ಪ್ರಕಟನಾದನು ಆಗ ವೀರಬಲ್ಲಾಳನಿಗೆ ಜ್ಞಾನವಾಗಿ ಶ್ರೀ ಶಂಕರನಿಗೆ ದೀರ್ಘದಂಡ ನಮಸ್ಕಾರ ಮಾಡಿದನು. ಈ ವೀರ ಭಕ್ತಿಗೆ ಮೆಚ್ಚಿ ಈಶ್ವರನು ಏನು ಬೇಡುತ್ತೀಬೇಡು ಎಂದು ಕೇಳಲು ವೀರಬಲ್ಲಾಳನು ನಿನ್ನ ಸನ್ನಿಧಿಯಲ್ಲಿ ನನ್ನನ್ನು ಇಟ್ಟುಕೊಂಡು ಕಾಪಾಡಬೇಕು. ಇಲ್ಲಿ ನಿನ್ನ ಲಿಂಗವು ಸ್ಥಿರವಾಗಿ ಜಗತ್ತಿನ ಜನರು ಪೂಜಿಸಿದರೆ ಅವರಿಗೆ ಅಷ್ಟ ಸಿದ್ಧಿಗಳು ದೊರೆಯುವಂತಾಗಬೇಕೆಂದು ಬೇಡಿಕೊಂಡನು. ಆದಕ್ಕೆ ಶಂಕರನು ಆವನ ತಂದೆಯಾದ ಚಂಡೇಶನಿಗೆ ಬದುಕಿಸಿ ಆವನ ಆಪೇಕ್ಷೆಯಂತೆ ಆ ಲಿಂಗಕ್ಕೆ ಗೋಲಗೇರಿ ಲಿಂಗವೆಂದು ಹೆಸರಿಟ್ಟು ಕಾಪಾಡಿದನು.

ಮತ್ತೆ ತಂದೆ ಮಕ್ಕಳಿಬ್ಬರಿಗೂ ಕೈಲಾಸಕ್ಕೆ ಕರಕೊಂಡು ಹೋಗಿ ಮುಕ್ತಿ ಕೊಟ್ಟನು. ಆ ಲಿಂಗವಿದ್ದ ಸ್ಥಳವು ಈಗ ಗೋಲಗೇರಿ ಗ್ರಾಮವಾಗಿ ಪ್ರಸಿದ್ಧಿಗೆ ಬಂದು ಮಹತ್ವದ ಯಾತ್ರಾಸ್ಥಳವಾಗಿದೆ. ಈ ಚರಿತ್ರದ ಮಹಿಮೆಯನ್ನು ಶ್ರೀ ಬೀರೇಶ್ವರನು ತನ್ನ ಶಿಷ್ಯನಾದ ಮಹಾಲಿಂಗನಿಗೆ ಹೇಳಿದನು. ಮಹಾಲಿಂಗನು ಸಂತೋಷಪಟ್ಟು ನೀನು ಇಂಥ ಸತ್ಕೃತ್ಯರಾದ ಹಾಲುಮತದ ಕುರುಬರಿಗೆ ಕುಲದೇವನಾಗಿ ಮೆರೆಯುತ್ತಿರುವುದು ಯೋಗ್ಯವಿದೆ. ಕಾರಣ ನಾನು ನಿನ್ನ ಸೇವಕನಾಗಿ ಭೂಲೋಕದಲ್ಲಿ ನಡೆದು ಮೋಕ್ಷ ಹೊಂದುವೆನೆಂದು ಹೇಳಿದನು. ಉಭಯತರು ಆನಂದಭರಿತರಾದರು.

## ಶ್ರೀ ಬೀರೇಶನು ವೀರ ಮಹಾಲಿಂಗನು ತಮ್ಮ ಮಹಿಮೆಯನ್ನು ಪ್ರಕಟಗೊಳಿಸಲಿಕ್ಕೆ ಹೋದದ್ದು.

ತಮ್ಮ ಲೀಲೆಗಳನ್ನು ತೋರಿಸಲಿಕ್ಕೆ ಕೊಲ್ಹಾಪುರಿಯಲ್ಲಿರುವ ಸೋಮೇಶ್ವರ ದೇವಾಲಯಕ್ಕೆ ಹೋದರು. ಅಲ್ಲಿ ಸೋಮೇಶ್ವರನ ಸ್ತೋತ್ರ ಮಾಡಿ ಆ ದೇವರ ಅನುಗ್ರಹ ಪಡೆದು ಮಾರ್ಗ ಕ್ರಮಣ ಮಾಡುತ್ತ ಹಾಲುಭಾವಿ ಎಂಬ ಗ್ರಾಮಕ್ಕೆ ಬಂದರು. ಅಲ್ಲಿ ಸರ್ವರನ್ನು ಕೂಡಿಸಿ ಧರ್ಮ ಬೋಧ ಮಾಡಿ ಯಾವತ್ತರನ್ನೂ ಜಾಗ್ರತಗೊಳಿಸಿದರು. ಮುಂದೆ ಎಷ್ಟೋ ಗ್ರಾಮಗಳಿಗೆ ಹೋಗಿ ಅಲ್ಲಿ ಭಕ್ತರಿಂದ ಗುಡಿಗಳನ್ನು ಕಟ್ಟಿಸಿ ಬೀರದೇವರನ್ನು ಸ್ಥಾಪಿಸಿ ಪೂಜೆ ಮಾಡಲು ಅಪ್ಪಣೆ ಮಾಡಿದರು. ಅದರಂತೆ ಮಾಡಲು ಜನರು ಒಪ್ಪಿಕೊಂಡರು. ಮುಂದೆ ಹಾಗೆಯೇ ಮಾರ್ಗಕ್ರಮಣ ಮಾಡುತ್ತ ಪುಣ್ಯಸಂಪತ್ತಿಯಾಗಿರುವ ಕ್ಷೇತ್ರಗಳನ್ನು ಕಂಡರು. ಮತ್ತು ಕುಂತಲ, ಕಳಿಂಗ, ಕಾಶ್ಮೀರ ಅಂಗ, ವಂಗ, ಕಾಂಬೋಜ, ಮಲಯಾಳ, ನೇಪಾಳ, ಕೇರಳ ದೇಶಗಳ ಪರ್ಯಟನ ಮಾಡುತ್ತ ಆನಂದಭರಿತರಾಗಿ ಭಕ್ತರಿಗೆ ಬೋಧ ಮಾಡುತ್ತ ಜಿಲ್ಲಿಗುತ್ತಿಪುರಕ್ಕೆ ಬಂದು ತಲ್ಪಿದರು. ಆಗ ಬೀರೇಶನು ಅಕ್ಕ ಮಾಯಮ್ಮನಿಗೆ ನಮಸ್ಕಾರ ಮಾಡಿ ನಾನು ತ್ರಿಕಾಲಜ್ಞಾನಿಯಾದ ಒಬ್ಬ ಶಿಷ್ಯನನ್ನು ಕರಕೊಂಡಿರುವೆನೆಂದು ಹೇಳಿದನು. ಇವನ ಹೆಸರು ಮಹಾಲಿಂಗನು. ಇವನನ್ನು ಕೂಡಿಕೊಂಡು ಮಾಡಿದ ಚರಿತ್ರವನ್ನು ಹೇಳಿದನು. ಕೆಲವು ದಿವಸಗಳ ಮೇಲೆ ಅಕ್ಕಮಾಯಮ್ಮನು ಬೀರೇಶನು ಮತ್ತು ಮಹಾಲಿಂಗನು ಮೂವರೂ ಕೂಡಿಕೊಂಡು ಬಂಕಾ

ಪುರವೆಂಬ ಪಟ್ಟಣಕ್ಕೆ ಬಂದರು. ಬಂಕಾಪುರವು ಬಹು ಪುರಾತನ ಪಟ್ಟಣವಿದ್ದು ಅಲ್ಲಿ ಜೋಡು ಶಿವಲಿಂಗಗಳಿಂದ ಉದ್ಭವಿಸಿದ ಬಂಕನಾಥನೆಂಬ ದೇವರು ಇರುವನು. ಅಲ್ಲಿ ಬಗೀ ಬಂಕಯ್ಯನೆಂಬ ಒಬ್ಬ ತಪಸ್ವಿಯು ಆ ದೇವಾಲಯದಲ್ಲಿ ಆ ಶಿವಲಿಂಗದ ಅನುಷ್ಠಾನ ಪ್ರಭಾವದಿಂದ ಬೆಳಗುತ್ತಿದ್ದನು. ಆ ದೇವಾಲಯಕ್ಕೆ ಸಮೀಪದಲ್ಲಿ ಶಿದ್ದನಗುಡ್ಡವೆಂಬುದೊಂದು ಗುಡ್ಡವಿರುವದು. ಆ ಗುಡ್ಡದಲ್ಲಿ ಒಬ್ಬ ರಾಕ್ಷಸನು ವಾಸಿಸುತ್ತಿದ್ದು ಜನರಿಗೆ ಪೀಡೆ ಕೊಡುತ್ತಿದ್ದನು. ಹಾಗೂ ಆ ಬಂಕಯ್ಯನೆಂಬ ಶಿವಶರಣನಿಗೂ ಪೀಡಿಸುತ್ತಿದ್ದನು. ಆಗ ಬಂಕಯ್ಯ ಮತ್ತು ಕೆಲ ಜನರು ಕೂಡಿಕೊಂಡು ಶ್ರೀ ಬೀರೇಶ್ವರನಲ್ಲಿಗೆ ಬಂದು ತಮಗೆ ಈ ರಾಕ್ಷಸನಿಂದ ಆಗುತ್ತಿರುವ ತಾಪವನ್ನು ಹೇಳಿಕೊಂಡರು. ಆಗ ಶ್ರೀ ಬೀರೇಶ್ವರ ಮತ್ತು ಮಹಾಲಿಂಗರು ಕೂಡಿಕೊಂಡು ಬಂಕನಾಥ ದೇವಾಲಯಕ್ಕೆ ಹೋಗಿ ಆ ದೈತ್ಯನ ಉಪಟಳವನ್ನು ಪುನಃ ಕೇಳಿ ಶಿದ್ದನ ಗುಡ್ಡಕ್ಕೆ ಹೋಗಿ ಆ ರಾಕ್ಷಸನನ್ನು ಕೊಂದುಬಿಟ್ಟರು. ಮರಣ ಕಾಲಕ್ಕೆ ಆ ದೈತ್ಯನು ಬೀರೇಶನ ಪಾದಕ್ಕೆರಗಿ ನನ್ನನ್ನು ಉದ್ಧಾರ ಮಾಡಬೇಕೆಂದು ಬೇಡಿಕೊಂಡನು. ಹಾಗೇ ಆಗಲೆಂದು ಬೀರೇಶ್ವರನು ಅಂದನು. ಮತ್ತು ಆ ರಾಕ್ಷಸನ ಎಲ್ಲ ಅವಯವಗಳನ್ನು ಕತ್ತರಿಸಿ ಅವುಗಳಿಂದ (ಬಾವನ್ನ) ಐವತ್ತೆರಡು ಬಿರುದಾವಳಿಗಳನ್ನು ಮಾಡಿದನು ಮತ್ತು ತನ್ನ ಭಕ್ತರನ್ನು ಕರೆದು ಒಬ್ಬೊಬ್ಬರಿಗೆ ಒಂದೊಂದು ಬಿರುದಾವಳಿಯನ್ನು ಕೊಡಲಾರಂಭಿಸಿದನು. ಅವುಗಳಲ್ಲಿ ಮುಖ್ಯವಾದ ಕೆಲವು ಬಿರುದಾವಳಿಗಳು ಮುಖ್ಯವಾದ ಕೆಲವು ಭಕ್ತರಿಗೆ ಕೊಡಲ್ಪಟ್ಟವು. ಅವು ಇಂತಿವೆ ದೇವಣ್ಣನಿಗೆ ಡೊಳ್ಳು, ಜಗದೇವನಿಗೆ ಚಂದ್ರವಾದ್ಯ ಬುಳ್ಳನಿಗೆ ತಾಳ, ರಾಯನಿಗೆ ಕರ್ನಿ, ಮರಿವ ಕಾಳಿಂಗನಿಗೆ ಕೊಳಲು, ಕಲ್ಲಯ್ಯನಿಗೆ ಕಾಳಿ, ಲಿಂಗಗೆ ಜಾಗಟೆ, ಸಂಗನಿಗೆ ಜಗಜಂಪು, ಮಲ್ಲನಿಗೆ ಚತ್ತರಗಿ, ಸೋಮಲಿಂಗನಿಗೆ ಡಂಕಾ, ಮಡಿವಾಳನಿಗೆ ನಿಶಾನಿ, ಲಿಂಗಬಸಪ್ಪನಿಗೆ ಚಿನಕಾಳಿ ಉಳಿದ ಬಿರುದಾವಳಿಗಳು ಹಂಚಲ್ಪಟ್ಟನಂತರ ಶ್ರೀ ಬೀರೇಶ್ವರ ಶಿಷ್ಯ ಮಹಾಲಿಂಗ ಮತ್ತು ಅಕ್ಕ ಮಾಯವ್ವ ಕೂಡಿಕೊಂಡು ಊದುತ್ತ ಬಾರಿಸುತ್ತ ಸಂಭ್ರಮದಿಂದ ಭೂತಾಳಸಿದ್ಧನ ಆಲಯಕ್ಕೆ ಬಂದರು. ಭೂತಾಳಸಿದ್ಧನು ಬಾವನ್ನ ಬಿರುದಾವಳಿಗಳಿಗೆ ಅಷ್ಟವಿಧಾನ ಪೂಜೆ ಮಾಡಿ ಶ್ರೀ ಬೀರೇಶ್ವರನಿಗೆ

ಬಿರದಂಕ ಬೀರಶಿದ್ಧ ಎಂಬ ನಾಮವನ್ನು ಪ್ರಕಟ ಮಾಡಿ ಎಲ್ಲ ಶಿಷ್ಯ ಸಮುದಾಯಕ್ಕೆ ಮೃಷ್ಟಾನ್ನ ಭೋಜನ ಮಾಡಿಸಿದನು. ಈಗಲೂ ಬಂಕಾಪುರದ ಒಂದು ಭಾಗಕ್ಕೆ ಅಂಕದ ಖಣವೆಂಬ ಹೆಸರು ಅದೆ. ಆ ಅಂಕದಖಣದಲ್ಲಿ ಬಿರುದಂಕ ಶಿದ್ಧನೆಂಬ ಕುರುಹುಗಳು ಪ್ರಸಿದ್ಧವಿರುತ್ತವೆ. ಭೂತಾಳಶಿದ್ಧನಲ್ಲಿ ಭೋಜನ ತೀರಿಸಿಕೊಂಡು ಶ್ರೀ ಬೀರೇಶ್ವರ ಮಹಾಲಿಂಗ ಮತ್ತು ಮಾಯವ್ವ ಇವರು ತಮ್ಮ ಕುರುಹುಗಳನ್ನು ಇಟ್ಟು ಶಿಷ್ಯ ಸಮೂಹಕ್ಕೆ ಸದ್ಬೋಧ ಮಾಡಿ ಬಂಕಾಪುರ ಬಿಟ್ಟು ಮುಂದಕ್ಕೆ ಸಾಗಿದರು. ಮುಂದೆ ನಾಲ್ಕು ಮೈಲುಗಳಷ್ಟು ದೂರ ಹೋಗಲು ಅಲ್ಲಿ ಒಂದು ಗುಡ್ಡ ಹತ್ತಿತು. ಆ ಗುಡ್ಡದಲ್ಲಿ ಇದ್ದು ತಮ್ಮ ಮಂತ್ರ ತಂತ್ರಗಳಿಂದ ಅಲ್ಲಿ ಒಂದು ಊರನ್ನು ನೆಲಿಸಿದರು. ಅದಕ್ಕೆ ಈಗ ಮಂತ್ರೋಡಿ ಎಂಬ ಹೆಸರು ಅದೆ. ಅಲ್ಲಿ ಮಂತ್ರೋಡಿ ಶಿದ್ಧನೆಂಬ ದೇವರ ಗುಡಿಯನ್ನು ಕಟ್ಟಿಸಿ ನಡೆದು ಅಲ್ಲಿಂದ ಶ್ರೇಷ್ಠವೆನಿಸುವ ಹೊಸೂರೆಂಬ ಪಟ್ಟಣಕ್ಕೆ ಮೂವರೂ ಸಾಗಿದರು. ಅಲ್ಲಿ ಭೋಜೇಂದ್ರನೆಂಬ ಅರಸನು ಆಳುತ್ತಿದ್ದನು ಆತನು ಈ ಮಹಾತ್ಮರನ್ನು ಕಂಡು ಆದರದಿಂದ ಸತ್ಕರಿಸಿ ತನ್ನ ಅರಮನೆಗೆ ಕರೆದೊಯ್ದನು. ಮತ್ತು ಭಕ್ತಿಪೂರ್ವಕ ಸೇವೆ ಮಾಡಹತ್ತಿದನು. ಹೀಗೆ ಭಕ್ತಿಪೂರ್ವಕ ಪೂಜೆ ಮಾಡುತ್ತಿರಲು ಕೇವು ದಿನಗಳು ಕಳೆದ ನಂತರ ಆ ಅರಸನ ಮಗನು ಮರಣ ಹೊಂದಲು ಅರಸನು ಬಹಳ ದುಃಖದಿಂದ ಬಂದು ಬೀರೇಶನಿಗೆ ಹೇಳಲು ಬೀರೇಶನು ತನ್ನ ಮಂತ್ರ ಪ್ರಭಾವದಿಂದ ಮತ್ತು ಭಸ್ಮ ಭಂಡಾರದಿಂದ ಆ ಹುಡುಗನನ್ನು ಬದುಕಿಸಿದನು. ಅರಸನು ಮಗನು ಬದುಕಿದ್ದನ್ನು ನೋಡಿ ಬೆರಗಾಗಿ ಇವರೇ ನಮ್ಮ ಕುಲದೇವರೆಂದು ತಿಳಿದು ಗುಡಿ ಕಟ್ಟಿಸಿ ನಡಕೊಳ್ಳಲಾರಂಭಿಸಿದನು. ಸರ್ವ ಕುಲ ಬಾಂಧವರು ಭಕ್ತಿಯಿಂದ ನಡಕೊಳ್ಳ ಹತ್ತಿದರು. ಮುಂದೆ ಮೂವರೂ ಅಲ್ಲಿಂದ ಸಾಗಿ ಪ್ರಯಾಣ ಮಾಡುತ್ತ ಆಯಾ ಸ್ಥಳಗಳಲ್ಲಿ ಬೀರೇಶ್ವರನ ಗುಡಿಗಳನ್ನು ಕಟ್ಟಿಸುತ್ತ ಅದಕ್ಕೆ ಭಕ್ತಿಯಿಂದ ನಡಕೊಳ್ಳಲು ಉಪದೇಶಿಸುತ್ತ ಕಲ್ಯಾಣಪುರವನ್ನು ಪ್ರವೇಶ ಮಾಡಿದರು. ಕಲ್ಯಾಣಪುರವು ಬಹು ದೊಡ್ಡ ಪಟ್ಟಣವು. ಅತಿ ವಿಸ್ತಾರವಾದದ್ದು ಇದ್ದು ಅಲ್ಲಿ ವೀರಶೈವ ಜನಾಂಗದ ಮಹಾಮಹಿಮನಾದ ಶ್ರೀ ಬಸವೇಶ್ವರನು ಅಲ್ಲಿ ಇರುತ್ತಿದ್ದನು. ಆ ಮಹಾಮಹಿಮನಲ್ಲಿ ಮಹಾ ಮಹಾ ಶಿವಶರಣರಾದ

ಜಂಗಮರು ಎಣಿಕೆ ಇಲ್ಲದಷ್ಟು ಇದ್ದರು. ಇವರಲ್ಲಿ ಸುವಿದಿತ ಮಹಾತ್ಮರು ಕಿನ್ನರಿ ಬ್ರಹ್ಮಯ್ಯ, ಮೋಡಿಹುಲ್ಲ ಬಂಕಯ್ಯ, ಸಾಳಿಗಿ ನಾರಯ್ಯ, ಕಲಿಕೇತ ಬ್ರಹ್ಮಯ್ಯ, ವೇದಾರ ಕ್ಯಾತಯ್ಯ, ಇನ್ನೂ ಅನೇಕ ಶಿವಶರಣರು ಕೂಡಿಕೊಂಡು ಆ ಊರಲ್ಲಿ ಸತ್ತ ಗೂಳಿಯನ್ನು ಹೊರಿಸುತ್ತ ಒಳ್ಳೇ ವೈಭವದಿಂದ ಊರಲ್ಲಿ ತರುತ್ತಿದ್ದರು. ಇದನ್ನು ಮಹಾಲಿಂಗನು ನೋಡಿ ಒಂದು ಕಾಗಿಯನ್ನು ಬಾಯ ದಿಂದ ಕೊಂದು ಅದನ್ನು ಹೊತ್ತುಕೊಂಡು ಅವರ ಮೆರವಣಿಗೆಯ ಮುಂದೆ ತಂದು ಒಗೆದನು. ಇದನ್ನು ಕಂಡು ಜನರು ಹೇಯಮಾಡಿಸಿ ಸಿಕ್ಕ ಹಾಗೆ ಹಳಿದು ನೀನು ಯಾರು? ನಿನ್ನ ಕುಲ ಯಾವದು? ಎಂದು ಪ್ರಶ್ನೆ ಮಾಡಿದರು. ಆಗ ಮಹಾಲಿಂಗನು ಅಂದದ್ದು:— ಅಯ್ಯಾ ನಾನು ರೇವಣಸಿದ್ಧೇಶ್ವರನ ಪುತ್ರ ನನ್ನ ಹೆಸರು ಮಹಾಲಿಂಗರಾಜ ನನ್ನ ಕುಲದೇವರು ಬೀರೇಶ್ವರನು. ನಾನು ಹಾಲುಮತದ ಕುರುಬನು. ಅಂತಾ ಹೇಳಿದನು. ಮತ್ತು ನೀವು ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರಿದ್ದು ಜಗತ್ತನ್ನೇ ಪಾವನ ಮಾಡತಕ್ಕವರು ಹೀಗಿದ್ದು ಈ ಸತ್ತ ಬಸವನ ಪ್ರಾಣಪ್ರತಿಷ್ಠೆ ಮಾಡದೆ ಮೆರವಣಿಗೆಯಿಂದ ಒಯ್ಯುಹತ್ತಿ ನನಗೇ ಲಿಂಗವಿಲ್ಲದ ಭವಿ, ಹಾಗೆ ಹೀಗೆ ಎಂದು ನುಡಿಯುತ್ತಿ ರಲ್ಲ! ಇದು ನಿರ್ಣಯವೇ? ನೀವು ಸತ್ಯಶಾಲಿಗಳಾದರೆ ಅಹಂಕಾರ ಬಿಟ್ಟು ಈ ಬಸವನ ಪ್ರಾಣ ಪಡೆಯಿರಿ. ಇಲ್ಲವಾದರೆ ನಾನು ನನ್ನ ಬಾಂಧವರನ್ನು ಕೂಡಿ ಕೊಂಡು ಶ್ರೀ ರೇವಣಸಿದ್ಧೇಶ್ವರನ ಅನುಗ್ರಹ ಪಡೆದು ಸತ್ತ ಕಾಗಿಯ ಹಾಗೂ ಬಸವನ ಪ್ರಾಣ ಪಡೆದು ಬೀರೇಶ್ವರನ ಶಿಷ್ಯ ಮಹಾಲಿಂಗನೆಂಬ ಬಿರುದನ್ನು ಸಾರಿಸುವೆನು. ಇದರಲ್ಲಿ ನಮ್ಮ ನಿಮ್ಮ ಪವಾಡುಗಳನ್ನು ಈ ಜಗತ್ತು ನೋಡಿ ಹರುಷ ಹೊಂದಲಿ ಎಂದು ಅನ್ನಲು ಆಗ ಯಾವತ್ತೂ ಜಂಗಮರು ಈ ಹುಡುಗ ನು ಏನೇನೋ ಕೊಚ್ಚುವನಲ್ಲ. ಅಂದು ಸತ್ತ ಬಸವನನ್ನು ಭೂಮಿಯ ಮೇಲೆ ಇಳಿಸಿ ಒಳ್ಳೇ ಭಕ್ತಿಯಿಂದ ಗುಗ್ಗುಳ ಸಮಾಧ ಮಾಡಿದರು. ಆದರೂ ಸತ್ತ ಬಸವನು ಏಳಲಿಲ್ಲ. ಆಗ ಚಿಂತೆಯಿಂದ ಇಳಿಮುಖರಾಗಿ ಕುಳಿತರು. ಇದನ್ನು ನೋಡಿ ವೀರ ಮಹಾಲಿಂಗನು ತನ್ನ ಜನರನ್ನು ಕೂಡಿಸಿ ರೇವಣಸಿದ್ಧೇಶ್ವರನನ್ನು ಮನದಲ್ಲಿ ನೆನೆದು ತನ್ನ ಗುರುವಾದ ಶ್ರೀ ಬೀರೇಶ್ವರನು ಕೊಟ್ಟ ಭಂಡಾರ ಭಸ್ಮದಿಂದ ಕಾಗಿಯ ಹಾಗೂ ಬಸವನ ಮೇಲೆ ಹಚ್ಚಿ, ಮಂತ್ರ ಪಠಿಸಲು ಕಾಗಿ

ಹಾಗೂ ಬಸವನು ಎಷ್ಟು ನಿಂತವು. ಮಹಾಲಿಂಗನ ಪವಾಡವು ಗೆದೆಯಿತು. ಆಗ ಎರಡೂ ಪಂಗಡದವರು ಮಹಾಲಿಂಗನನ್ನು ಹರಸಿ ಮೆರೆಸಿದರು. ಅಲ್ಲಿ ಗುರುಶಿಷ್ಯರೊಂದಾಗಿ ಸಂತೋಷದಿಂದ ಇರುತ್ತಿರಲು ಕೋಣನೂರಲ್ಲಿ ಇರುವ ಜಡಶಿದ್ಧರಿಗೆ ಇದು ಸಹನವಾಗದೆ ಬೀರೇಶ್ವರನು ಮಹಾಲಿಂಗನೊಬ್ಬನೇ ಶಿಷ್ಯನೆಂದು ಮೆರೆಸುತ್ತಿರುವನು. ನಾವು ಶಿಷ್ಯರಲ್ಲವೇ ಎಂದು ಅಸೂಯೆಪಟ್ಟು ಮಹಾಲಿಂಗನನ್ನು ಮರ್ದನ ಮಾಡಬೇಕೆಂದು ಕರಿದೇವರ ಉತ್ಸವದ ಕುಂಡ ಮಾಡಿಸಿ ಅದರಲ್ಲಿ ಅಗ್ನಿ ಹೊತ್ತಿಸಿ ದೇವಕಾರ್ಯ ಮಾಡಲು ಆರಂಭಿಸಿದರು. ಆಗ ಮಹಾಲಿಂಗನಿಗೆ ಭಂಡಾರ, ಭಸ್ಮ ಕಳಿಸಿದರು. ಅವನ್ನು ಮಹಾಲಿಂಗನು ಸ್ವೀಕರಿಸಿ ಆ ಸಮಾರಂಭಕ್ಕೆ ಹೊರಟನು. ನಡು ದಾರಿಯಲ್ಲಿ ಎಷ್ಟೋ ಮಂದಿ ಕೊಲೆಗಡಕರನ್ನು ಕೂಡ್ರಿಸಿ ಹೊಡೆಯಲಿಕ್ಕೆ ಹಚ್ಚಿದ್ದರು. ಆಗ ವೀರ ಮಹಾಲಿಂಗನು ಬರಲು ಅವನನ್ನು ಅಡ್ಡಗಟ್ಟಿ ತರುಬಿ ಹೊಡೆಯಬೇಕೆಂಬುವಷ್ಟರಲ್ಲಿ ಮಹಾಲಿಂಗನು ಮಾಯದಿಂದ ತಪ್ಪಿಸಿಕೊಂಡು ಕೋಣನೂರಿಗೆ ಹೋಗಿ ಅಲ್ಲಿ ಉರಿಯುತ್ತಿರುವ ಅಗ್ನಿ ಕುಂಡದಲ್ಲಿ ಹಾರಿ ನಂದಿಸಿಬಿಟ್ಟನು. ಅದನ್ನು ಕಂಡು ಅಲ್ಲಿ ನೆರೆದವರೆಲ್ಲರೂ ಸೋಜಿಗಗೊಂಡು ಮಹಾಲಿಂಗನನ್ನು ಕೊಂಡಾಡಿದರು. ಮತ್ತು ಆ ಜಡಶಿದ್ಧರೆಲ್ಲರೂ ಬಂದು ಬೀರೇಶ್ವರನಿಗೆ ತಪ್ಪಾಯಿತೆಂದು ಬೇಡಿಕೊಂಡು ಬೀರೇಶ್ವರನನ್ನು ಕುಲದೇವರೆಂದು ಮೆರೆಸಿದರು. ಆಗ ಬೀರೇಶನು ಪರಮ ಭಕ್ತಿಯುಳ್ಳ ಮಹಾಲಿಂಗನಂಥ ಶಿಷ್ಯರು ಸಿಗುವದು ದುರ್ಲಭವೆಂದು ಹರಸಿದನು. ಮತ್ತು ಮಹಾಲಿಂಗನಿಗೆ ನೀನು ನಂದಿಸಿದ ಅಗ್ನಿಯನ್ನು ಪ್ರಜ್ವಲಿಸಿ ಬಾ ಎಂದು ಹೇಳಿದನು. ಆಗ ಮಹಾಲಿಂಗನು ಕೋಣನೂರಿಗೆ ಹೋಗಿ ನಂದಿಸಿದ ಅಗ್ನಿಯನ್ನು ಪುನಃ ಪ್ರಜ್ವಲಿಸಿದನು. ಅಲ್ಲಿ ನೆರೆದ ಸರ್ವ ಭಕ್ತ ಸಮುದಾಯವು ನಮ್ಮ ಕುಲದೇವರ ಪ್ರೇಮದ ಶಿಷ್ಯ ಮಹಲಿಂಗನೆಂದು ಜಯಘೋಷ ಮಾಡಿದರು.

## ಕೌರಬ ಋಷಿಯಿಂದ ಕುರುಬರ ಹನ್ನೊಂದು ಗೋತ್ರಗಳು ಉತ್ಪತ್ತಿ ಆದದ್ದು.

ಶ್ರೀ ಬೀರೇಶ್ವರನು ಶಿವನಿಂದ ಕೇಳಿದ ಗೋತ್ರಗಳ ಮಹಿಮೆಯನ್ನು ತನ್ನ ಶಿಷ್ಯನಾದ ಮಹಾಲಿಂಗನಿಗೆ ಹೇಳಿ ಸಂತೋಷಪಡಿಸಿದ ವಿವರ:—

ಹೇ ಮಹಾಲಿಂಗನೇ ಕೇಳು. ದ್ವಾಪಾರ ಯುಗಾಂತರದಲ್ಲಿ ಚಿಂತಜಾಂತಕನು ಒಂದು ದಿನ ಪತ್ನಿ ಪಾರ್ವತಿ ಪ್ರಥಮಗಣ ಮೊತ್ತದಿಂದ ನಂದಿ ಸಹಿತವಾಗಿ ಹಿಮಾಚಲಕ್ಕೆ ಬರಲು ಆಗ ಗಿರಿರಾಜನು ವೈಭವದಿಂದ ಈಶ್ವರನನ್ನು ಇದುರ್ಗೊಂಡ ಕರೆದೊಯ್ದು ಚಿತ್ರ ಭುವನದೊಳಗೆ ಕೂಡ್ರಿಸಿ ಕುಶಲ ಪ್ರಶ್ನೆ ಮಾಡುತ್ತ ಸಂತೋಷದಿಂದ ಇದ್ದನು. ಆ ಸಮಯದಲ್ಲಿ ಭೃಗು. ಭಾರದ್ವಾಜ ಕೌಂಡನ್ಯ, ಕಶ್ಯಪ, ವಸಿಷ್ಠ, ಕೌರಬಾದಿಗಳೆಂಬ ಭೂಸುರ ಮುನೀಶ್ವರರು ಶಿವನನ್ನು ಸೇವಿಸಿ ವೇದ ಮಂತ್ರಗಳನ್ನು ಪಠಿಸುತ್ತ ಅಜಹರಿಗಳೊಡನೆ ಇರುತ್ತಿದ್ದರು. ಆ ಸಮಯದಲ್ಲಿ ಅಮರಗಣಂಗಳು ಬಂದಿಸುತ್ತಲಿದ್ದರು. ಆಗ ಹಿಮವು ಯಾವತ್ತರಿಗೂ ಬಾಧಿಸುತ್ತಿರಲು ಇದು ಅತಿ ತ್ರಾಸವದೆ ಎಂದು ತಿಳಿದು ಅಲ್ಲಿರುವ ಮುನಿಗಳು ಒಂದಾಗಿ ಶ್ರೀ ಶಂಕರನ ಸ್ಮರಣೆ ಮಾಡಿ ಈ ಥಂಡಿಯ ತಾಪ ತಾಳಲಾರೆನೆಂದು ಮೊರೆ ಹೊಕ್ಕರು. ಮತ್ತು ವಿನಯದಿಂದ ಬೇಡಿಕೊಂಡರು.

## ೧ ಪ್ರಮಾಣ ಭವಿಷೋತ್ತರ ಪುರಾಣ.

॥ ಶ್ಲೋಕ ॥

ಹಿಮತ್ಪರ್ವತೇ ದೇವಾಃ । ಶೀತ ಬಾಧಾಬಿ ಪೀಡಿತಾಂ ।
ನಿಸ್ಸಂಶಯಂತ ದಾಜಿಗ್ಮಃ । ಶರಣಂ ಲೋಕ ಶಂಕರಂ।
ಹಿಮಾನ್ಯೂನಾಃ ಮಹದೇವ । ಭೃಶಂ ವೈಪೀಡಿತಃ ಪ್ರಭೋ ॥
ರಕ್ಷಸ್ವ ಕೃಪಾಸಮುದ್ರ । ದೇವಾನ್ ಸರ್ಸಿ ಗಣಾನ್ ಸದಾ ॥೧॥

ಆಗ ಪರಮೇಶ್ವರನು ಮುನಿಗಳ ಅಪೇಕ್ಷೆಯಂತೆ ತನ್ನ ಫಾಲಾಕ್ಷ ನೇತ್ರದಿಂದ ಅಗ್ನಿ ಹುಟ್ಟಿಸಿ ಅಲ್ಲಿದ್ದ ಯಾವತ್ತರಿಗೂ ಹಿಮತಾಪವನ್ನು ಪರಿಹರಿಸಿದನು. ಆದರಿಂದ ಅವರು ಸಂತೋಷಭರಿತರಾಗಿ ಕೊಂಡಾಡಿದರು.

ಆಗ ಮಹಾ ಮುನಿ ಕೌರಬನನ್ನು ನೋಡಿ ಈಶ್ವರನು ಹೇ ವೃದ್ಧಮುನಿಯೇ ನೀನು ಸರ್ವರಿಗೂ ತಗಲುವ ಹಿಮತಾಪವನ್ನು ಕಳಿಯಲಿಕ್ಕೆ ವಸ್ತ್ರಗಳನ್ನು ನಿರ್ಮಿಸಿ ಕಾಪಾಡಬೇಕೆಂದು ಹೇಳಿದನು.

## ೨ ಪ್ರಮಾಣ ಭವಿಷೋತ್ತರ ಈಶಾನ್ಯ ಸಂಹಿತೆ.

॥ ಶ್ಲೋಕ ॥

ಪ್ರಾಜ್ಞಸ್ತ್ವಂ ಸರ್ವ ಧರ್ಮಜ್ಞ । ಸರ್ವ ಕಾರ್ಯ ವಿಶಾರದಃ ॥
ವಸ್ತ್ರಾಕುರು ಮಹಾಭಾಗ । ಶೀತ ಬಾಧಾ ನಿವೃತ್ತಿಯೇ ॥
ತೇನ ದೇವಾ ಸದಾ ವೃಷ್ಟಾಃ । ಭವಿಷ್ಯಂತಿ ಮುನಿಃ ॥

ಇತ್ತಿತ್ತಲಾಗಿ ಕೆಲವು ಕಾಲ ಕಳೆಯುತ್ತಿರಲು ಕುರರೀ ಮೃಗಗಳ ರೋಮಗಳನ್ನು ಕತ್ತರಿಸಿ ತಂದು ವಸ್ತ್ರಗಳನ್ನು ನಿರ್ಮಿಸಿ ಮಹದೇವನ ಅಪ್ಪಣೆ ಯಂತೆ ಪಾಲಿಸಿದನು. ಆಗ ಯಾವತ್ತೂ ಮುನಿಗಳು ಕೊಂಡಾಡಿದರು.

## ೩ ಪ್ರಮಾಣ ಆಗ್ನೇಯ ಪುರಾಣ.

॥ ಶ್ಲೋಕ ॥

ಕುರರೀಮೃಗ ಮಸ್ತಾಣಿ । ಕೃತ್ವಾ ಕೌರಭೋ ಮುಷಿಃ ।
ತನ್ನಾಮ ಸಾರ್ಥಕಂ ಚಕ್ರೇ । ದೇವಾನಾಂ ಹಿ ಹಿತಕಾರ್ಯಯಾ ॥

ಒಂದು ದಿನ ಪಾರ್ವತಾದೇವಿ ಪರಮೇಶ್ವರನನ್ನು ಕುರಿತು ಹೇಳಿದ್ದೇನಂದರೆ ಇಲ್ಲಿರುವ ಸುರರು ದೇವತೆಗಳು ಭೂಲೋಕದ ಜನರಿಗೂ ಕೂಡಾ ಹಿಮ ತಾಪವು ಆಗದಂತೆ ಕಾಪಾಡಬೇಕೆಂದು ಅರಿಕೆ ಮಾಡಿಕೊಂಡಳು.

## ೪ ಪ್ರಮಾಣ ಇತಿಹಾಸಮಂಜರಿ ೨೪ ನೇ ಅಧ್ಯಾಯ ೩ ನೇ ಗ್ರಂಥ.

॥ ಶ್ಲೋಕ ॥

ಪಾರ್ವತಿ ಮುದಿತಾ ತತ್ರ । ಶಂಕರಂ ಲೋಕ ಶಂಕರರ ॥
ಪ್ರಚ್ಛ ಗೌರಿ ಸಂತುಷ್ಟ । ಲೋಕಾನಾಂ ಹಿತ ಕಾಮ್ಯಯಾ ॥
ಶಂಭೋ ಸರ್ವಜ್ಞ ದೇವೇಶಾ । ಕೌರಭಃ ಪ್ರಾಸ್ಯ ಸತ್ವರಂ ॥
ಸಂತತೇಂಕಾರಯಾಮಾಸ । ಕೌರಬಾನ್ ಸಂಮತನ ॥
ತೇ ಧರ್ಮಾದಿ ಯುಕ್ತಾಶ್ಚ । ಭವಿಷ್ಯಂತಿ ಕಲಾಯುಗೇ ॥ ೪ ॥

ಧರಣಿಯಲ್ಲಿ ಯಾವತ್ತರಿಗೂ ಥಂಡಿಯಾಗದಂತೆ ಯಾವನಾದರೊಬ್ಬ ಮಹಾಮಹಿಮನನ್ನು ಹುಟ್ಟಿಸಿ ಅವನ ವಂಶಜರಿಂದ ವಸ್ತ್ರಗಳನ್ನು ನಿರ್ಮಿಸ

ಬೇಕೆಂದು ಹೇಳಿದಳು. ಶಂಕರನು ಸತಿಯಳ ಮಾತಿಗೆ ಒಪ್ಪಿ ಕೌರಬನೆಂಬ ಯತಿ ವರೇಣ್ಯನಂ ಕರೆದು ಸಪ್ತ ವಿಂಶತಿ ಮಹಾ ನಕ್ಷತ್ರಗಳ ಸಹಾಯದಿಂದ ಭೂಮಿಗಿಳಿದು ನಿನ್ನ ಮಹಿಮೆಯಿಂದ ಕುರುಬರನ್ನು ಹುಟ್ಟಿಸಿ ಪಸ್ತ್ರ ನಿರ್ಮಿಸಬೇಕೆಂದು ಹೇಳಿದನು.

## ೫ ಪ್ರಮಾಣ ಇತಿಹಾಸಮಂಜರಿ ೨೩ ನೇ ಅಧ್ಯಾಯ ೩ ನೇ ಶ್ಲೋಕ.

॥ ಶ್ಲೋಕ ॥

ಸಾಧು ಪೃಷ್ಟಂ ಮಹಾದೇವಿ । ಲೋಕಾನುಗ್ರಹ ಕಾಂಕ್ಷಯಾ ॥
ತಥಾ ಕರೋಮಿ ಸರ್ವಜ್ಞೇ । ಕೌರಬಾತೇ ಮುನಿ ಸಪ್ತಮಾಂ ॥

ಮತಿ ಮಾನ್ಯನಾದ ಕೌರಬ ಮುನಿಗಳು ಸರ್ವಜ್ಞನಾದ ಈಶ್ವರನ ಅಪ್ಪಣೆಯಂತೆ ಭೂಲೋಕಕ್ಕೆ ಬಂದು ಹಿಮಗಿರಿ ಪರ್ವತದಲ್ಲಿ ಕುಳಿತು ಯೋಗಾಭ್ಯಾಸ ಮಾಡುತ್ತಾ ಕೃಷ್ಣಾಂಜನದಲ್ಲಿ ಮುಹೂರ್ತಮಾಡಿ ಪರಮೇಶ್ವರನ ಪಾದಕಮಲಗಳನ್ನು ನೆನಿಸಿ ಸ್ತೋತ್ರದಿಂದ ಇರಲು ಕಾಂಪಿಲ್ಯ ಪೃಥಕ ಶ್ರೇಯು ವರ ಮಹಾಬಲಗಣ ಕುಶಲ ಮೆರೆಯುವ ಪ್ರಭಾವ ಕಂಡು ಈಶ್ವರನು ಕರುಣ ಹುಟ್ಟಿ ಹನ್ನೊಂದು ನಾಮದ ಕುರುಬರ ಗೋತ್ರಗಳನ್ನು ಸೃಜಿಸಿ ಉದ್ಧಾರ ಮಾಡಿದನು.

ಕಾಂಪಿಲ್ಯನಿಗೆ ಚಿತ್ರಾಶ್ವ ಮತ್ತವಗೆ ವರ ಪೂರ್ಣ ಆತಂಗೆ ಚಂದ್ರಶೇಖರನವನಿಗೆ ಹರಕಲಿಯು ಮೇಣವಗೆ ವಿದ್ವೇಷ ಅತನಿಗೆ ವಿಶಾರದ ನೆಂಬ ಮಹಾ ಮಹಿಮನು

## ೬ ಪ್ರಮಾಣ (ಶೈವಖಂಡ ಅನ್ವಯಖಾಂಡ) ಸ್ಕಂದದಲ್ಲಿ

॥ ಶ್ಲೋಕ ॥

ಕಾಂಪಿಲ್ಯಸ್ಯ ಮಹಾಬಾಹೋ । ಚಿತ್ರಾಶ್ವಶ್ಚ ಪರಂತ ತಪಃ ।
ತಸ್ಯ ಪೂರ್ಣಸ್ಸುತೋ ಜ್ಞಾತ । ತತ್ಪೂನುಶ್ಚಂದ್ರಶೇಖರಃ ।
ತತ್ಪೂನಶ್ಚ ಮಹಾಜ್ಞೇಯಃ । ಸನ್ವೈ ಹರಕುಲ ಸ್ಮೃತಃ ॥
ತತ್ಪೂತ್ರಸ್ಸು ಭಗೋಜಾತಃ । ಸಾಮ್ನಾವೈ ಶಾರದ ಸ್ಮೃತಃ ॥
ಧರ್ಮಾತ್ಮ ಸತ್ಯಸಂಧಶ್ಚ । ವಿಜ್ಞಾತಾ ಶೃತಿವಾದವಾನ್ ॥
ರೋಮ ವಸ್ತ್ರ ಪ್ರಣೀತಾಚ ತಪಸ್ವೀ ವಾಗ್ಮೀದಾ ವರಃ ॥

ಉದ್ಭವಿಸಿ ಧರೆಯೊಳು ಧರ್ಮಿಷ್ಠನಾಗಿ ಸುಂದರಿ ಕಲಾವತಿ ಎಂಬವಳ ನ್ನು ಲಗ್ನವಾಗಿ ಸಚ್ಚರಿತ್ರದಿಂದ ಜಪತಪಾದಿ ಸತ್ಕ್ರಿಯಾದ ಆಚಾರದಿಂದ ಉತ್ಸಹನಾಗಿ ಇರುತ್ತಿದ್ದನು. ಇತ್ತಲಾಗಿ ಮೃಗಸಿಂಗನೆಂಬ ಮುನಿ ಹಿಮ ತಾಪ ತಡೆಯದೆ ದುಗುಡದಿಂದ ವಿಶಾರದನ ಹತ್ತರ ಬಂದು ವಲ್ಕಲಾಂಬರ ಬೇಕೆಂದು ಬೇಡಲು ಅವನಿಗೆ ವಸ್ತ್ರವನ್ನು ಕೊಟ್ಟು ನಮಿಸಲು ಅವನು ಅತಿ ಹರುಷದಿಂದ ವಿಶಾರದನ ವಂಶ ಉದ್ಧಾರವಾಗಲೆಂದು ವರವನ್ನು ಕೊಟ್ಟನು. ಅದರಿಂದ ಅವನಿಗೆ ಶಿವಸಾಯೋಜ್ಯವಾಗಿ ಮೋಕ್ಷ ಹೊಂದಿದನು. ಇಳಿಯೊಳಗಿದು ಕಾಂಪಿಲ್ಯ ಗೋತ್ರವಾಯಿತು.

ಮತ್ತೆ ಕೇಳು ಶಿಷ್ಯನೇ ಮುಂದೆ ಹೇಳುವೆನು. ಚಿತ್ತವಿಟ್ಟು ಲಾಲಿಸು ಪ್ರಥುಕನಿಗೆ ವಿಶಾಲಾಕ್ಷ ಅವಗೆ ಸುಮತಿ ಆತಗೆ ಪುಂಡರೀಕನವನಿಗೆ ವ್ಯಾಳ ನವನಿಗೆ ಕಪಿಲ ವಿಳಸಿತ ಉದಿಸಿದನವನಿಗೆ ಕಳೆಯುಳ್ಳ ಸರ್ವಜ್ಞನೆಂಬ ಮಹಾ ಮಹಿಮನು ಹುಟ್ಟಿ ಬೆಳೆದು ಪ್ರಪಂಚ ವಿಷಯ ಅನುಭವಿಸಿ ಪರಿಪೋಷಿಸುತ್ತಿದ್ದನು.

## ೭ ಪ್ರಮಾಣಲೈಂಗ ಪುರಾಣ ಗಾರ್ಗ್ಯ ಸಂಹಿತೆ
## ೧೩ ನೇ ಅಧ್ಯಾಯ ೫೩ ನೇ ಶ್ಲೋಕ.

॥ ಶ್ಲೋಕ ॥

ಪ್ರಥುಕಸ್ಯ ವಿಶಾಲಾಕ್ಷ । ತಸ್ಯೈವ್ಯೆ ಸುಮತಿಸ್ಸುತಃ ।
ತದಾತ್ಮಜಾ ಪುಂಡರೀಕಃ । ತತ್ಸುತೋ ವ್ಯಾಳ ಕಸ್ಮತಃ ॥
ತಸ್ಮಾಚ್ಛೀಕ ವಿಲೋಜಿಜ್ಞ । ಸರ್ವಜ್ಞಶ್ಚ ತತಃ ಪರಂ ॥
ಗೋತ್ರಕರ್ತ ಮಹಾ ಭಾಗಃ । ಕೀರ್ತಿಮಾನ ಭಕ್ತ ತತ್ಪರಃ ॥
ಗಿರಿಜಾವಗಮೇಕಾಂಚ । ತ್ರೋಷ ಯತ್ನಾಂ ತಪ್ರೋ ಬಲಾತ್ ॥
ವೃಷ್ಟಿಂ ಸಂಪ್ರಾಪ್ತವಾರ್ । ಚಿತ್ರಾಂ ದೇವರ್ಷಿಪಿ ದುರಾಸದಾ ।

ಸರ್ವಜ್ಞನು ದೇಶದೊಳು ಮಳೆ ಇಲ್ಲದೆ ಬೆಳೆ ಬಾರದೆ ಕಷ್ಟಪಡುತ್ತಿರುವ ಜನರನ್ನು ನೋಡಿ ಸರ್ವಜ್ಞನೆಂಬ ಮಹಿಮನು ಜನರ ದುಃಖ ನಿವಾರಣ ಮಾಡುವದಕ್ಕೆ ಅರಣ್ಯಕ್ಕೆ ಹೋಗಿ ಮಹಾ ಕಠಿಣ ತಪಸ್ಸು ಮಾಡಿ ಪಾರ್ವತಿ ಪರಮೇ

ಶ್ವರನನ್ನು ಮೆಚ್ಚಿಸಿ ವರವ ಪಡೆದು ಮಳೆಗರಿಸಿ ಕ್ಷಾಮ ಬಾಧೆಯನ್ನು ಕಳೆದು ಸರ್ವ ಜನರನ್ನು ಸಂರಕ್ಷಿಸಿದನು. ಆ ಮೊದಲ್ಗೊಂಡು ಮಹಾ ಪ್ರಭುಕ ಗೋತ್ರವೆಂದು ಪ್ರಖ್ಯಾತಿ ಹೊಂದಿತು.

ಮತ್ತು ಮರಳಿ ಕೋಮಲಶೃಣಿ ಮಹಿಮಾಂಕನಿಗೆಸಂತಾನವಿಲ್ಲವೆ ಮಕ್ಕಳ ದಶಿಂದ ಹೇಮಾದ್ರಿ ತಟಾಕದಲ್ಲಿ ಕಟ್ಟುಗ್ರ ತಪಸ್ಸು ಮಾಡಲು ಆದಕ್ಕೆ ಮಹಾ ದೇವನು ಮೆಚ್ಚಿ ನಿನಗೆ ಒಬ್ಬ ಮಗನು ಸುಶೀಲನಾಗಿ ಹುಟ್ಟುವನು ನೀನು ಸುಖ ದುಃಖ ಸಮನೆಂದು ತಿಳಿ. ಅಂತಾ ವರವನ್ನು ಕೊಟ್ಟನು.

## ಆ ಪ್ರಮಾಣ ತ್ರಿಪುರಾಶಿದ್ಧಾಂತ (ವಿಷ್ಣು ಪುರಾಣ) ಯಮುಳ ಪ್ರಕರ್ಣ ೮೨ ನೇ ಶ್ಲೋಕ.

॥ ಶ್ಲೋಕ ॥

ಬಹುಕಾಲಂ ಮಹಾತ್ಮ ಸೌ । ಧರ್ಮಪತ್ನಿ ಸಮನ್ವಿತಂ ।
ಅನಿಪತ್ಯೋಭವದ್ರು । ನಿಷ್ಟಲಾಢ್ಯಯ ವ ದ್ರುಮಃ ॥
ತತ್ಸೋ ಕಾಡಬಹುದಾ ತಪ್ತಃ । ತಪಸ್ತೇನೆ ಪರಂ ತಪಃ ॥
ಗಿರೀಶ ಸ್ತು ಪ್ತ ಮಂತತ್ರ । ಪುತ್ರಂಪ್ರದಾತ್ಗುಣಾನ್ವಿತಂ ॥
ಲೇನೆ ದುಃಖಂಚ ಮೋದಂಚ । ಪ್ರಾಪ್ತುಮಾನೆ ಜನಕಸ್ತತಃ ॥

ಶೃಣಿಯುನಿನ ಹೆಂಡತಿ ಬ್ರಮಾಂಬಿಕೆ ಗರ್ಭದಲ್ಲಿ ನವಮಾಸ ತುಂಬಿ ಹೆರ ಯಲು ಸಂತೋಷದಿಂದ ಕಾಲ ಕಳೆಯುತ್ತಿದ್ದರು. ಆವಾಗ್ಗೆ ಆ ಶಿಶುವಿಗೆ ಹಾವು ಕಚ್ಚಿ ಮೃತಿ ಹೊಂದಲು ಆ ಶೃಣಿಯು ಅತಿ ದುಃಖದಿಂದ ನಾನು ಭೂಲೋಕದಲ್ಲಿದ್ದು ಏನು ಫಲವೆಂದು ಈಶ್ವರನ ತಪಸ್ಸಿನಲ್ಲಿದ್ದು ತನ್ನ ಶಿರ ವನ್ನೇ ಕಡಿದುಕೊಂಡನು. ಆದಕ್ಕೆ ಈಶ್ವರನು ಪ್ರತ್ಯಕ್ಷನಾಗಿ ಅವನ ಪ್ರಾಣ ಪಡೆದು ಆ ಶಿಶುವನ್ನು ಬದುಕಿಸಿದನು. ಇದಕ್ಕೆ ಶೃಣಿ ಗೋತ್ರವೆಂದು ಹೆಸ ರಾಯಿತು.

ಮುಂದೆ ಹೇಳುವೆನು ಕೇಳು, ಶಿಷ್ಯನಾದ ಮಹಾಲಿಂಗನೆ ಎಂದು ಬೀರೇ ಶನು ಹೇಳಲಾರಂಭಿಸಿದನು,

ಮಹಾಬಲನೆಂಬ ಮಹಾ ಮಹಿಮನು ಹಿಮಗಿರಿಯಲ್ಲಿ ಹರನನ್ನು ಧ್ಯಾನಿ ಸುತ್ತಾ ಅಮಳ ವರ ಪಡೆದು ಸತ್ಯದಿಂದ ಇರುತ್ತಿರಲು ಒಂದು ದಿನ ಸುರಪನ

ಓಲಗಕ್ಕೆ ದಿನಕರಾತ್ಮಜನು ನರರೊಳು ಸುಕೃತಿಗಳು ಯಾರು ಎಂದು ಕೇಳಲು ಅದಕ್ಕೆ ಅಮರಪತಿ ಇಳಿಯೊಳು ಮಹಾಬಲನೆಂಬ ಮಹಾ ಮಹಿಮನು. ಗಿರಿ ವರನನ್ನು ಸ್ತುತಿಸುತ್ತಾ ಸತ್ಯಾಚರಣೆಯಲ್ಲಿ ಶೋಭಿಸುತ್ತಿರುವನೆಂದು ಹೇಳಿದನು.

ಅದನ್ನು ಕೇಳಿ ಕೋಪವನ್ನು ತಾಳಿ ಭೂಸುರನಾಗಿ ಕಪಟದಿಂದ ಆ ಮಹಾ ಬಲನ ಮಂದಿರಕ್ಕೆ ಬಂದು ಭಿಕ್ಷೆ ಬೇಡಲು ಆ ಮಹಾಬಲನು ಸತ್ಕರಿಸಿ ಕೈಮು ಗಿದು ಏನು ಬೇಕು ಸ್ವಾಮೀ ಎಂದು ಕೇಳಲು ನಾನು ಬೇಡಿದ್ದನ್ನು ಕೊಡು ತ್ತೀನೆಂದು ವಚನ ಕೊಟ್ಟರೆ ಕೇಳುವೆನೆಂದು ಹೇಳಲು ಎಲೈ ಭಕ್ತನೇ ನಿನ್ನ ಹೆಂಡತಿ ಸುಂದರಿಯಾದ್ದರಿಂದ ನನಗೆ ನಿನ್ನ ಸತಿಯಳ ಮೇಲೆ ಅಪೇಕ್ಷೆಯಾಗಿದೆ ಕೊಡು ಎಂದು ಕೇಳಿದನು. ಒಳ್ಳೇದು ಕೊಡುತ್ತೀನೆಂದು ಹೇಳಿ ತನ್ನ ಸತಿ ಯಳನ್ನು ಕರೆದು ನಾನು ನಿನ್ನನ್ನು ಈ ಭೂಸುರನಿಗೆ ದಾನವಾಗಿ ಕೊಟ್ಟಿರುವೆನು. ನೀನು ಅವನ ಸಂಗಡ ಹೋಗಬೇಕು ಅನ್ನಲು ಆ ಮಹಾ ಪತಿವ್ರತೆಯಳು ಸಿದ್ಧವಾಗಿ ಬಂದಳು. ಆಕೆಯನ್ನು ನೋಡಿದ ಕೂಡಲೆ ಬೇಡಿದ ಬ್ರಾಹ್ಮಣನು ದಿಗ್ಭ್ರಾಂತನಾಗಿ ಕುಳಿತು ಕಳವಳಿಸಹತ್ತಿದನು. ಇದನ್ನು ತಿಳಿದು ಶಿವನು ಪ್ರತ್ಯಕ್ಷನಾದನು.

## ೯ ಪ್ರಮಾಣ ಭವಿಷೋತ್ತರ ಶೂದ್ರಾದಿ ಕರ್ಣಾ ಅಧ್ಯಾಯ ೨೪ ನೇ ಶ್ಲೋಕ.

॥ ಶ್ಲೋಕ ॥

ಮಹಾಬಲೋ ಮಹಾತ್ಮಾ ಸೌ । ಸತ್ಯ ಮಾದ್ಧರ್ಮ ತತ್ಪರಃ ॥
ಭವಿಷ್ಯತಿ ಕಲಾವೇಧಾಃ । ಸತ್ಯ ಧರ್ಮಂ ಪರಾಯಣಃ ॥
ಯೇಕದಾಸೌ ಪರೀಕ್ಷತ್ರ್ತಃ । ಕೃತಾರ್ಥೋ ಭೂತ್ಮಹಾದ್ಭುತಂ ॥
ಸಯೋಗಿ ಸಚ ಮುಕ್ತೋಭೂತ್ । ಬೃಹ್ಮರಶಿಗಣ ಸಂಪುಸ್ತುತಃ ॥

ಈಶ್ವರನು ಸತಿ ಪತಿಗಳ ಸತ್ಯಕ್ಕೆ ಮೆಚ್ಚಿ ಅವರಿಗೆ ಬೇಡಿದ ವರವನ್ನು ಕೊಟ್ಟು ಕಾಪಾಡಿದನು. ಆ ಸತಿಯಳನ್ನು ಕೇಳಿದ ಆ ಯಮನಿಗೆ ದಂಡನೆ ಮಾಡಿ ಶಿಕ್ಷಿಸಿದನು. ಮತ್ತು ಅವರ ಕೀರ್ತಿ ಉಳಿಯಬೇಕೆಂದು ಅದಕ್ಕೆ ಮಹಾಬಲ ಗೋತ್ರವೆಂದು ಕೌರಬೀಯವರಲ್ಲಿ ಮೆರೆಯಲೆಂದು ಸತಿ ಪತಿಗಳಿ ಗೆ ಮೋಕ್ಷ ಕೊಟ್ಟನು. ಮತ್ತೆ ಮುಂದೆ ಮೆರೆದ ಮಹಿಮರ ಚರಿತ್ರೆ ಹೇಳು

ವೆನು ಕೇಳು ಎಂದು ಶಿಷ್ಯ ಮಹಾಳಿಂಗನಿಗೆ ಬೀರೇಶನು ಹೇಳಲಾರಂಭಿಸಿದನು.

ಮತ್ತೆ ಕಣಕಂಗೆ ಮಗ ಕಳ್ಳೇಶ್ವರ ಅವನಿಗೆ ಜಯಶಿದ್ಧ ಮತ್ತವಗೆ ತಿಪ್ಪೇಶಾಂಗದೇವನೆಂಬ ಉಭಯತರು ಹುಟ್ಟಿದರು. ಶಂಕರನ ದಯದಿಂದ ತಿಪ್ಪೇಶನು ಬ್ರಹ್ಮಚಾರಿಯಾಗಿ ಲಗ್ನ ಮಾಡಿಕೊಳ್ಳದೆ ಗೊಂಡಾರಣ್ಯದಲ್ಲಿ ತಪಸಂ ಮಾಡಿ ಸಿದ್ಧಿ ಹೊಂದಿದನು.

## ೧೦ ಪ್ರಮಾಣ ರುದ್ರಸಂಹಿತೆ ಭವಿಷೋತ್ತರ ಪುರಾಣ ೩ ನೇ ಅಧ್ಯಾಯ ೧೨೪ ನೇ ಶ್ಲೋಕ.

॥ ಶ್ಲೋಕ ॥

ಮಹಾಬಲಸ್ಯ ವಂಶೇತು । ಗಣಕಶ್ಚ ಮಹಾಸಂಭೂತ ॥
ತದ್ವಾಂ ಶಾಶ್ಚ ಜಯಶಿದ್ಧಿ । ತಿಪ್ಪೇಶ್ವರ ಪುರೋಗಮಂ ॥
ಅಂಗದೇವೇನ ವಂಶಶ್ಚ । ವರ್ಧಿತೋ ಭೂತ್ಮಕಾ ಯುಗೇ ॥

ತಿಪ್ಪೇಶನ ಅನುಜನಾದ ಗದೇವನೆಂಬ ವಂಶದವರಿಗೆ ತಿಪ್ಪರು ಗಣಕ ಗೋತ್ರವೆಂದು ಹೆಸರಾಯಿತು.

ಮತ್ತೆ ಉಸುರುವೆನು ಕೇಳು. ಏನೆಂದರೆ ಈಶ್ವರನ ವರವಿನಿಂದ ಸಿರಂತರದಿ ಕ್ಷತ್ರಿಯ ಮತಕ್ಕನುಸಾರವಾಗಿ ವಿಬ್ರಾಜಿತನೆಂಬುವನಿಗೆ ನಾಲ್ಕು ಮಂದಿ ಮಕ್ಕಳಾದರು.

## ೧೧ ಪ್ರಮಾಣ ಬ್ರಹ್ಮಕೈವರ್ತ ಪುರಾಣ್ಕನೇಷು ಋಷಿ ಬ್ರಹ್ಮ ಸಂವಾದದಲ್ಲಿ.

॥ ಶ್ಲೋಕ ॥

ವಿಬ್ರಾಜಿತೋ ಕೌರಬೀಯಃ । ಚತ್ವಾರಸ್ಸು ಸುವೇಷುತಃ ॥
ತೇಕ್ಷಾತ್ರನ್ ವೈಸಮಾಶ್ರಿತ್ಯ । ನಿಹತ ಯುದ್ಧ ಭೂತಲೇ ॥
ತಸ್ಮಾತ್ಧರ್ಮನ್ಯ ಸಂಸ್ಥಾನಾಂ। ಮನುಷ್ಯಾಣಾಮ ಯುಕ್ತದಂ॥
ತದ್ಗೋತ್ರಂಚ ವಿನಾಶಂ ವೈ । ಪ್ರಾಪ್ತ ಸತ್ವರ ಮೇವ ತತ್ ॥
ಮೃತಗೋತ್ರಸ್ಯ ವಿಜ್ಞಾನಾತ್ । ಸಪ್ತ ಗೋತ್ರಯಿಮೆ ಸ್ಮೃತಃ ॥೧॥

ಕುರುಬರ ಮತ ಬಿಟ್ಟು ಅನ್ಯ ಮತದಂತೆ ನಡೆದ ಕಾರಣ ಕ್ಷತ್ರಿಯರಂತೆ ಸಮರವಲ್ಲಿ ಮರಣಹೊಂದಿದ ಕಾರಣ ಅವರ ಸಂತತಿಯವರಿಗೆ ಮೃತಗೋತ್ರ ವೆಂಬ ಹೆಸರಾಯಿತು.

ಮುಂದಿನ ಗೋತ್ರಗಳ ವಿಸ್ತಾರ ಬೀರೇಶನು ಹೇಳತೊಡಗಿದನು. ಕೌರ ಬಿ ಖಿ ಷಿಯ ಏಳನೇ ಮಗನಾದ ಕುಶಲನೆಂಬವನಿಗೆ ವೀರಮಾತಂಗ ಅವನಿಗೆ ಗಂಭೀರಸಂಜೆಯ ಅವಗೆ ಕಲ್ಯಾಣನೆಂಬುವನು ಹುಟ್ಟಿ ಕ್ಷಾತ್ರ ಧರ್ಮಾಚಾರಕ್ಕೆ ಸೇರಿ ಸುಖದಿಂದ ರಾಜ್ಯ ಪಾಲಿಸಿಕೊಂಡು ಇರುತ್ತಾ ಯಜ್ಞ ಸಮಾರಂಭ ಮಾಡಿ ಭೂಸುರರಿಗೆ ಬೇಡಿದ ಪದಾರ್ಥಗಳನ್ನು ದಾನವಾಗಿ ಕೊಡುತ್ತಿದ್ದನು. ಆವಾಗ್ಗೆ ಕಪಟ ಬ್ರಾಹ್ಮಣನು ಅವನಲ್ಲಿಗೆ ಬಂದು ವೋಸದಿಂದ ಅವನ ರಾಜ್ಯ ವನ್ನೇ ಬೇಡಿದನು. ಅದಕ್ಕೆ ಅವನು ಎಲ್ಲಾ ರಾಜ್ಯವನ್ನೇ ತನ್ನ ವಚನದಂತೆ ಕೊಟ್ಟನು. ತಾನು ಅರಣ್ಯಕ್ಕೆ ಹೋಗಿ ನಿಶ್ಚಲ ಮನಸ್ಸಿನಿಂದ ಶಿವನನ್ನು ಕುರಿತು ತಪಸ್ಸು ಮಾಡಿ ಈಶ್ವರನನ್ನು ಮೆಚ್ಚಿಸಿದನು. ಆಗ ಮಹಾದೇವನು ಪ್ರಸನ್ನನಾದನು.

## ೧೨ ಪ್ರಮಾಣ ಶೇಷ ಭಾರತೇ ಭವಿಷದ್ರಾಜೇತಿಹಾಸ ವರ್ಣನೆ ತ್ರತಿಯಾಧ್ಯಾಯಃ ೯೭.

॥ ಶ್ಲೋಕ ॥

ಸಂಜಯಸ್ಯತು ಕಲ್ಯಾಣಃ । ಶೋಭುಲ್ಲಕ್ಷಣ ವೇದಿಕಃ ॥
ಅಧ್ವರಂ ನ್ ಕಾರಯಾಮಾಸ । ಅಶ್ವಮೇಧಾದಿಕಾನ್ ನೃಪಃ ॥
ರಾಜ್ಯಂ ಬ್ರಾಹ್ಮಣ ಪಸ್ತೇಚ । ದತ್ತವಾನ್ ದಾನ ತತ್ಪರಃ ॥
ಬ್ರಾಹ್ಮಣಾಯುಕ್ತಾವೈ । ತಂ ರಾಜಾಶ್ಧಿಕೃತಾ ಭವಾನ್ ॥
ಪ್ರಜಾಪ್ರಾರ್ಥನೆಯಾ ರಾಜ್ಯಂ । ಬ್ರಾಹ್ಮಣಾನಾಂತ ದೈವಹ ॥
ಗೃಹ್ಯ ರಾಜ್ಯಂಶ ಸಾಸಾದಾ । ಸರ್ವ ದೇವಾದಿ ಪೂಜಿತಃ ॥ ೧೨ ॥

ಆಗ ಮಹಾದೇವನು ಏನು ಬೇಡುತ್ತೀ ಬೇಡು ಎನಲು ಕಲ್ಯಾಣನು ನನ್ನ ರಾಜ್ಯ ನನಗೆ ದೊರಕುವಂತೆ ಮಾಡಬೇಕೆಂದು ಬೇಡಿಕೊಂಡನು. ನಿನ್ನ ರಾಜ್ಯ ನಿನಗೇ ಸಿಗುವದು ಚಿಂತಿಸಬೇಡ ಎಂದು ವರವ ಪಾಲಿಸಿದನು. ಆವಾಗ್ಗೆ ಶಿವನ ವರದಿಂದ ಭೂಮಿ ಸೀಮ ತಕ್ಕೊಂಡ ಬ್ರಾಹ್ಮಣನು ತಾನೇ ಬಂದು

ನಾನು ರಾಜ್ಯ ಆಳಲಾರೆನು. ನೀನೇ ಆಳಬೇಕೆಂದು ಕಲ್ಯಾಣನನ್ನು ಪ್ರಸ್ನಿಸಿ ಕರಕೊಂಡು ಬಂದು ಆವನಿಗೆ ರಾಜ್ಯ ಒಪ್ಪಿಸಿ ವಿನಂತಿ ಮಾಡಿ ನಿನಗೆ ಮೋಸ ಮಾಡಿದ್ದು ತಪ್ಪಾಯಿತೆಂದು ಹೇಳಿಕೊಂಡನು. ಇವೇ ಕುಶಲ ಗೋತ್ರನೆಂದು ಭೂತಲದಲ್ಲಿ ಮೆರೆಯಿತು

ಇನ್ನು ಮುಂದೆ ಲಾಲಿಸು ಪ್ರಭಾವನೆಂಬ ಒಬ್ಬಿದನು ಕೌರಬನಿಂದ ಪ್ರಣವ ಪಂಚಾಕ್ಷರಿ ಮಂತ್ರ ಕಲಿತು ಗುರುವಾಜ್ಞೆಯಂತೆ ಜ್ಞಾನದಿಂದ ಶಿವಧ್ಯಾನ ಗೈಯುತ್ತ ಶಿವನನ್ನು ಒಲಿಸಿ ಸುರತ್ನ ಪಡೆದು ಅವರ ಮಹಿಮೆಯಿಂದ ಶಿವ ಕನ್ಯೆಯನ್ನು ಲಗ್ನ ಮಾಡಿಕೊಂಡು ಕೀರ್ತಿ ಪಡೆದನು.

## ೧೩ ಪ್ರಮಾಣ ಕೌಮುದಿ ಶಿದ್ಧಾಂತ (ಸೂರ್ಯಕೃತ)

## ೩ ನೇ ಸ್ತಬಕ ೪೮ ನೇ ಶ್ಲೋಕ.

॥ ಶ್ಲೋಕ ॥

ಪ್ರಭಾವ್ರೋ ಕೌರಬೀಯಸ್ । ಪ್ರಭಾವಂವೇತ್ತು ಮುಮುಕ್ಷವಃ ।
ಕುಶಃ ಸರ್ವ ಕಾರ್ಯೇಷು । ಪಾಪ ಮಹೇಶ್ವರಾತ್ ಧ್ರುವಂ ॥
ಗುರುಪಾದಿಷ್ಟ ಮಾರ್ಗೇಣ । ಸುಖನ್ಯಾ ಮುದ್ವಹೇ ನೃಪಃ ॥
ಮಣೀಶ್ಚ ಪ್ರಭಾವೇನ । ಸರ್ವಶಿದ್ಧಂಜ ಗಾಮುಕಃ ॥

ಆಗ ಮತಿವಂತನಾದ ಇವನಿಗೆ ಪ್ರಭಾವ ಗೋತ್ರವಾಯಿತು ಇನ್ನು ಕೇಳು. ಕೌರಬನ ನಿಜ ಸುತ ಮರ್ಕಸುಜ್ಞ ಆತನ ಪುತ್ರ ಘರ್ಮ[illegible]ನೆಂಬು ವನು ರಾಜ್ಯ ಪರಿಪಾಲಿಸುತ್ತಿರಲು ತನ್ನ ವೈಭವದೊಳಗೇ ಇದ್ದು ಒಂದು ದಿನ ಬೇಟೆಗಾಗಿ ಹೋಗಿ ಅಲ್ಲಿ ಒಬ್ಬ ಯತಿಯನ್ನು ಕೊಲ್ಲಲು ಅವನಿಗೆ [illegible] ತಗಲಿ ಜಾತ್ಯಾಂಧನಾಗಿ ಮೃತಿ ಹೊಂದಿವನು. ಅವನನ್ನು ಯಮಪುರಿಗೆ ಸೇರಿಸಿದರು.

## ೧೪ ಪ್ರಮಾಣ ವಿಜ್ಞಾನ ಚಂದ್ರಿಕಾ ಅಗಸ್ತ್ಯ ಕೃತ ನವತರಂಗ.

॥ ಶ್ಲೋಕ ॥

ಕರುಣಶ್ಚ ಮಹಾತ್ಮಸೌ । ಕುರರೀ ಚರ್ಮಧಾರಕಃ ॥
ತಸ್ಯ ಪುತ್ರಾರ್ಕ ಸಂಜ್ಞೋ । ಭೂತ್ ಜಾತ್ಯಾಂಧಶ್ಚ ಮಹಾಮತೀ ।
ತತ್ರಾತ್ರೋ ಮುನಿನಾ ಶಿದ್ಧಃ । ಕಾಲಧರ್ಮಾನು ಪಾಸಿಕಃ ॥
ಮಹಾ ಖುಷೇಶ್ಚ ವಧಯಾ । ನಿರಯಂ ಪ್ರಾಪ್ತವಾನ್ಸೌ ॥

ಧರ್ಮಜ್ಞನು ನರಕದಲ್ಲಿರಲು ಅವರ ಮರ್ಮವನ್ನು ತಿಳಿದು ಅವನ ಪುತ್ರ
ಪ್ರತೀಪನು ಸದ್ಧರ್ಮ ಮನಸ್ಸು ಮಾಡಿ ಸಂದೀಶ್ವರನನ್ನು ಕುರಿತು ವ್ರತ
ನೇಮದಿಂದ ತಪಸ್ಸುಗೈದು ತಂದೆಯ ಪಾಪ ಕರ್ಮ ಕಳೆದು ಉದ್ಧರಿಸಿದನು:
ಧರ್ಮದಿಂದ ತ್ಯಾಗ ಮಾಡಿದನು. ಇದಕ್ಕೆ ನಿರ್ಮಲ ಕರುಣ ಗೋತ್ರವೆಂದು
ಧರಿಯಲ್ಲಿ ಮೆರೆಯಲಾಯಿತು

ಮತ್ತೆ ಹೇಳುವೆನು ಚಿತ್ತವಿಟ್ಟು ಲಾಲಿಸು. ಈ ಭೂಮಿಯಲ್ಲಿ ರೇವಾ
ಪಟ್ಟಣದಲ್ಲಿ ಕುರುಬರ ನಿವಾಸ ಸ್ಥಳವಾಗಿತ್ತು. ಅಲ್ಲಿ ಮಹಾಬಲನೆಂಬ ಕುರುಬ
ನಿಗೆ ಸುಲಲಿತ ಪಾಂಜಲಿ ಅವಗೆ ಮೂರ್ಧಜನು ಅವನಿಗೆ ಲಿಂಗನು ಆತಗೆ ಸ್ವಾಮಿ
ಶ್ಯನುದಿಸಿದನು. ಅವನು ನಿರ್ಮಲ ಮಂಗಳಾಂಗಿಯನ್ನು ಅರ್ಧಾಂಗಿಯನ್ನಾ
ಗಿ ಮಾಡಿಕೊಂಡು ಇರಲು ಕಡೆಗೆ ಕೂಷ್ಮಾಂಡ ಫಲದಿಂದ ಪದ್ಮನನ್ನು ಪಡೆ
ದನು. ಅದು ಹ್ಯಾಗೆಂದರೆ ಸ್ವಾಮಿಶ್ಯನು ಮಂಗಳಾಂಗಿ ಸತಿಯೊಡನೆ ಸುಖದಿಂ
ದಿರಲು ಮಕ್ಕಳಿಲ್ಲವೆಂದು ಚಿಂತಿಸಿ ಈಶ್ವರನ ಆರಾಧನೆ ಶಿವಪೂಜೆಯನ್ನು
ಮಾಡುತ್ತಿರಲು ಅವರ ಭಾವಕ್ಕೆ ಮೆಚ್ಚಿ ಶಿವನು ವೃದ್ಧನಾಗಿ ಬಂದು ಭಿಕ್ಷವ
ಬೇಡಲು ಆ ದಂಪತಿಗಳು ತಮ್ಮಲ್ಲಿ ಅತಿಥಿಗೆ ಒಂದು ಕಾಸು ಸಹ ಇಲ್ಲ
ಆಗ ಮನೆಯಲ್ಲಿದ್ದ ಕುಂಬಳಕಾಯಿಯನ್ನು ತಂದು ನೀಡಿದರು. ಪಾದಕ್ಕೆ
ನಮಸ್ಕಾರ ಮಾಡಿದರು. ಆ ವೃದ್ಧನಾದ ಅತಿಥಿ ಸ್ವಲ್ಪ ಸಿಟ್ಟಿಗೆದ್ದವನಂತೆ
ನಟಿಸಿ ಆ ಕುಂಬಳ ಹಣ್ಣನ್ನು ನೆಲಕ್ಕೆ ಅಪ್ಪಳಿಸಿದನು. ಆಗ ಅದರಲ್ಲಿ ಒಂದು
ಕೂಸು ಇತ್ತು. ಅದನ್ನು ಕಂಡು ಸ್ವಾಮಿಶ್ಯನು ಆ ಅತಿಥಿಯನ್ನು ಅಯ್ಯಾ
ಇದೇನು ಸೋಜಿಗವು. ಎಂದು ಇದರ ಮಹಿಮೆಯು ತಮಗೆ ಗೊತ್ತಿದ್ದರೆ
ತಿಳಿಸಬೇಕೆಂದು ಬೇಡಿಕೊಂಡನು. ಆಗ ಮುನಿವರನು ಇವನು ಪದ್ಮನೆಂಬ
ಮಹಾಪುರುಷನು. ಇವನು ಅಗಸ್ತ್ಯ ಋಷಿ ಶಾಪದಿಂದ ನಂದಿಯು ಕೂಷ್ಮಾಂಡ
ದಲ್ಲಿ ಜನಿಸಿ ಬಂದಿರುವನು. ಜಗತ್ತೆಲ್ಲ ಉದ್ಧಾರ ಮಾಡುವನು ಕಾರಣ
ಈ ಶಿಶುವನ್ನು ಜೋಪಾನ ಮಾಡಿರಿ. ಈತನು ಚರಾಚರ ಪ್ರಾಣಿಗಳನ್ನು ರಕ್ಷಣೆ
ಮಾಡುವನು. ಅಂತಾ ಹೇಳಿ ಹೋದನು. ಅದನ್ನು ಕೇಳಿ ಆ ಸತಿ ಪತಿಗಳು
ಅತಿ ಸಂತೋಷ ಭರಿತರಾಗಿ ಬಂದ ಅತಿಥಿಯನ್ನು ಸತ್ಕರಿಸಿ ಪಾದಪೂಜೆ ಮಾಡಿ
ದರು. ಇತ್ತಲು ಆ ಶಿಶುವು ಬೆಳೆದು ಪ್ರಾಯಕ್ಕೆ ಬರುವ ವರೆಗೆ ಸತಿ ಪತಿಗಳು

ಪಾಲನ ಮಾಡಿದರು. ಅವನು ಪ್ರಾಯಕ್ಕೆ ಬಂದ ನಂತರ ಅವರ ಬಡತನ ನೋಡಿ ವ್ಯಸನಪಟ್ಟು ಅವರ ದರಿದ್ರತನವನ್ನು ಕಳೆಯಬೇಕೆಂದು ಅವರನ್ನು ಬೇಡಿಕೊಂಡನು.

## ೧೫ ಪ್ರಮಾಣ ಪಂಚಾಸ್ಯಿಕಾಯೂರ ಸೌರ ಪುರಾಣ ವ್ಯಾಸೋಕ್ತಿ ಕಂಠೀರವ ಸಂವಾದ.

॥ ಶ್ಲೋಕ ॥

ಪಂಚೇ ಕೌರಬ ಸಂಮತೇ ಸುರಗುರೌ । ವ್ಯಾಸಾಬಿಲಾಸ ಲೌಕಿರ್ಕ ॥
ದಿವ್ಯೇಪ್ರಾಬಲಿ ನಾದ್ಯ ವಾಸಿತ ಮಹಾ । ಸೇವಾಭಿದಾನೇ ತತಃ ॥
ಭೀಸ್ಮಸ್ತಸ್ಯನು ಲೋಭವತ್ । ಪ್ರಾಂಜಲಿಃ ಪ್ರಾಂಜಲೀ ಮಾರ್ಧ ॥
ಜೋಪ್ರೋಕ್ತಃ ತಸ್ಯ ಲಿಂಗೋ । ಮಹಾತ್ಮನಃ ತಸ್ಯೈವೈ ನೈಮಿಷೋ ।
ಸೂನುಃ ದಿವ್ಯ ಗ್ರಂಥಾರ್ಧ ತತ್ಪರಃ । ತಸ್ಯ ಬಾರ್ಯಾ ಸುಸಾಬ್ವಿಸಾ॥
ಮಂಗಳನಾಮ ಸಂಜ್ಞತಾ । ಅಕಸ್ಮಾತ್ ಸುಫಲಾಜ್ಞೇ ಪದ್ಮನಾಮ ಸುಪುತ್ರಕಂ ॥ ೧೫ ॥

ಹೇ ಪಿತನಾದ ನೈಮಿಶ್ಯನಿಗೆ ಆ ಪುತ್ರನು ತಾತನೇ ಕೇಳು. ನಿಮಗೆ ಬಹಳ ಬಡತನವದೆ. ಬಡತನವಿದ್ದಲ್ಲಿ ಸುಖವಿಲ್ಲ. ಜ್ಞಾನವಿಲ್ಲದವನಿಗೆ ಮೋಕ್ಷವಿಲ್ಲಾ ಕಾರಣ ನಾನು ಮಹಾದೇವನನ್ನು ಕುರಿತು ತಪಸ್ಸುಮಾಡಿ ಅರಣ್ಯದಲ್ಲಿದ್ದು ಅವನಿಂದ ದ್ರವ್ಯ ಸಂಪತ್ತು ಪಡೆದುಕೊಂಡು ಬರುವೆನು. ಅಂತಾ ಹೇಳಲು ಹೇ ಸುಶೀಲ ಮಗನೇ ಬಡತನವೆಂಬುವದು ಕಡೆತನಕ ಇರಲಿ. ನಮ್ಮ ಮನೆಗೆ ಆತಿಥಿಗಳು ಸದಾವಕಾಲದಲ್ಲಿ ಬರಲಿ. ಈಶ್ವರನ ಕರುಣ ಮಾತ್ರ ಇರಲಿ. ನೀನು ಮಾತ್ರ ಹೋಗಬೇಡಾ ಅನ್ನಲು ಆಗ ಆಕಾಶವಾಣಿಯು ಅವನನ್ನು ಕಳುಹಿಸಿ ಅವನಿಂದ ಜಗತ್ತಿನ ಉದ್ಧಾರವದೆ ಅನ್ನಲು ಆ ನುಡಿಗೆ ಒಪ್ಪಿ ಪದ್ಮನನ್ನು ಕಳುಹಿಸಿಕೊಟ್ಟನು. ಆಗ ಅಡವಿಗೆ ಹೋಗಿ ಉಗ್ರ ತಪಸ್ಸು ಮಾಡಲಿಕ್ಕೆ ಕುಳಿತನು. ತನ್ನ ಜಡ ಭಾವವನ್ನು ಅಳಿದು ನಿರ್ಮಲಚಿತ್ತನಾಗಿ ಶಿವನನ್ನು ಭಜಿಸಿ ಮಂತ್ರ ಜಪಿಸಿದನು. ಆವಾಗ್ಗೆ ಪರಮೇಶ್ವರನು ಪ್ರತ್ಯಕ್ಷನಾಗಿ ನಿಲ್ಲುವಷ್ಟರಲ್ಲಿ ಅವನು ಶಿವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ನಮ್ರ

ದರಿದ್ರತನ ಕಳೆದು ಧನವನ್ನು ಕೊಟ್ಟು ಉದ್ಧಾರ ಮಾಡಬೇಕೆಂದು ಬೇಡಿ ಕೊಳ್ಳಲು ಅವನಿಗೆ ಧನವಂತನಾಗೆಂದು ವರ ಕೊಟ್ಟು ಕಳುಹಿದನು. ಆವಾಗ್ಗೆ ಬಂದು ಮಾತಾಪಿತರಿಗೆ ಶಿವನಿಂದ ವರವನ್ನು ಪಡೆದುಕೊಂಡು ಬಂದಿರುವೆ ನೆಂದು ಹೇಳಿ ಇಂದಿನಿಂದ ದರಿದ್ರತನವನ್ನು ಕಳೆದು ಧನವಂತರಾಗಿರಿ, ಎಂದು ಹೇಳಿದನು, ಸುಖದಿಂದ ಕಾಲಕಳೆಯಿರೆಂದು ಹೇಳಿದನು. ಆಗ ಅವರು ಮಗ ನಿಗೆ ತಮ್ಮಾ ಈಗ ನಮ್ಮ ದೇಶಕ್ಕೆ ಕ್ಷಾಮಕಾಲ ಬಂದು ಸರ್ವರೂ ಬಡವರಾ ಗಿ ಕಷ್ಟಪಡುತ್ತಿರುವರು. ನಾವು ಒಬ್ಬರೇ ಸುಖದಿಂದ ಇರುವದು ನ್ಯಾಯವಾ ದದ್ದು ಅಲ್ಲ ಎಂದು ನುಡಿದರು.

## ಪ್ರಮಾಣ ಗರುಡ ಪುರಾಣ ಮಹಾತ್ಮೆ.

॥ ಶ್ಲೋಕ ॥

ಲೋಕೋಯಂ ರಕ್ಷಿತಾ ಯೇನೋ । ಸತ್ಪಾತ್ರೈ ಧನದಾನಸ್ಯೈಃ ।
ಸುವರ್ಣ ವರ್ಷದಾನೇನ ॥ ಲೋಕಾನ್ ರಕ್ಷಿಷ್ಯಮೋಬ್ರುಧೋ ॥

ಆಗ ಪದ್ಮನು ಲೋಕಕ್ಕೆ ಹಿತ ಮಾಡುವನೆಂದು ಅಪ್ಪಣೆ ಪಡೆದು ಪುನಃ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿ ಮೆಚ್ಚಿಸಿ ಮೂರುವರಿ ಘಳಿಗೆ ಸುವರ್ಣ ಮಳೆಗರಿಸಿ ಲೋಕೋದ್ಧಾರ ಮಾಡಬೇಕೆಂದು ಬೇಡಿಕೊಳ್ಳಲು ಅವ ರಂತೆ ಶಿವನು ವರ ಕೊಟ್ಟು ಕಳಿಸಿದನು ಆಗ ಆ ವರದಿಂದ ಸರ್ವರಿಗೂ ಆನಂ ದವಾಗುವಂತೆ ಸುವರ್ಣ ಮಳೆಗರಿಸಿದನು. ಅದರಿಂದ ಇದಕ್ಕೆ ಸುವರ್ಣ ಗೋತ್ರವೆಂಬ ಹೆಸರಾಯಿತು

ಈ ಪ್ರಕಾರ ಯಾವತ್ತೂ ಗೋತ್ರಗಳನ್ನು ಶ್ರೀ ಬೀರೇಶನು ಹೇಳಿದ್ದ ನ್ನು ಕೇಳಿ ಮಹಾಲಿಂಗನು ಅತಿ ಸಂತೋಷಚಿತ್ತನಾಗಿ ಹೇ ದೇವನೇ ಈ ಪ್ರಕಾರ ಭಕ್ತಿಯಿಂದ ಈಶ್ವರನನ್ನು ಒಲಿಸಿ ಸತ್ಯವಂತರೂ ಸಧರ್ಮಿಷ್ಟರೂ ಆಗಿ ವರದಿಂದ ಗೋತ್ರಗಳನ್ನು ನಿರ್ಮಿಸಿದ ಈ ಕುರುಬರೆಂಬ ಕಾಂಬ ೫೩ ಪುತ್ರರ ಶ್ರವಣದಿಂದ ನಾನು ಪುನೀತನಾದೆನು. ನಿಮ್ಮ ಸೇವೆ ಮಾಡಲು ಬಂದದ್ದು ಯೋಗ್ಯವಾಯಿತೆಂದು ಹರಿಸಿದನು.

ಆಗ ಶ್ರೀ ಬೀರೇಶನು ಇನ್ನು ಭೂಲೋಕದ ಸುಖ ಸಾಕು ಎಂದು ಸತಿ ಪುತ್ರ ಶಿಷ್ಯನನ್ನು ಕರಕೊಂಡು ಘನಗೋಪದಿಂದ ಶಿವಪುರಕೆ ಹೋಗುವ

ಭೀಮಪ್ಪ ಸತ್ತೆಪ್ಪ ಕಾಗವಾಡ ಸಾ॥ ಶಿದ್ದಾಪೂರ ತಾ॥ ಜಮಖಂಡಿ
ನಾಗಪ್ಪ ಲಕ್ಷ್ಮಪ್ಪ ಮಾಯಣ್ಣನವರ ಸಾ॥ ಮಹದಾಪೂರ ತಾ॥ ಗೋಕಾಕ
ಹೆಚ್. ಜಿ ನಗಾರಿ ಬುಲ್ ಪ್ರೊಡಕ್ಷನ್ ಸೆಂಟರ ವಿಜಾಪೂರ ಜುಮ್ಮಿಗಲ್ಲಿ
ಬಸೆಟ್ಟೆಪ್ಪ ಮುದಿಯಪ್ಪ ಮೇದಾರ(ಕುರುಬರ) ಸಾ॥ ಮೇದವಾಡ ತಾ॥ ಹಿರೇಕೆರೂರ
ರಾಮಪ್ಪ ಯಲ್ಲಪ್ಪ ಹುಲ್ಲೂರ ಸಾ॥ ಬಟ್ಕೂರ ತಾ॥ ಶಿರಹಟ್ಟಿ
ಶಿವಪ್ಪ ಭರಮಪ್ಪ ಭಿಲಾಡಿ ಸಾ॥ ಬನ್ನಿಕೊಪ್ಪ ,,
ಬಸಪ್ಪ ಅಡಿವೆಪ್ಪ ಗುಡ್ಡಣ್ಣನವರ ಸಾ॥ ದೇವಗಿರಿ
ಚನ್ನಬಸಪ್ಪ ಬಸಪ್ಪ ಕೊಪ್ಪದ ಸಾ॥ ಗಂಗನರಸಿ ತಾ॥ ಹಂಸಿ
ಶ್ರೀ ಕಾಡಪ್ಪನವರು ತೋಗೆಪ್ಪನವರ ಸಾ॥ ದಾವಣಗೇರಿ
ಹಡತಿ ಪಟೇಲ ಮಲ್ಲಪ್ಪನವರು ,,
ರಂಗಪ್ಪ ಚಿಡೋಣಿ ಸಾ॥ ರಾಮಗಾನಹಳ್ಳಿ ತಾ॥ ಹರಿಹರ
ನೀಲಪ್ಪ ಫಕೀರಪ್ಪ ಕಂತಿ ಸಾ॥ ಕಣವಿ ತಾ॥ ಗದಗ
ಶಿದ್ದಪ್ಪ ಪೂಜಾರ ವ ರಂಗಪ್ಪ ಮುರಾರಿ ಸಾ॥ ಕಣವಿ ತಾ॥ ಗದಗ
ಶಿವಪ್ಪ ಕಾಶಿಕಾಯಿ ಸಾ॥ ಕಣವಿ ,, ಪ್ರೋ. ಮುನಗುಂದ
ನಿಂಗಪ್ಪ ಮಲ್ಲಪ್ಪ ದೊಡ್ಡಮನಿ ಸಾ॥ ಚಿಕ್ಕಮಲ್ಲೂರ ತಾ॥ ಶಿಗ್ಗಾಂವ
ಬಸಪ್ಪ ರಾಮಣ್ಣ ನಾವಕ್ಕನವರ ,, ,,
ರಂಗಪ್ಪ ಕುರುಬರ ಸಾ॥ ಹಿರೇಬೂದಿಹಾಳ ತಾ॥ ಶಿಗ್ಗಾಂವ
ಜಟ್ಟೆಪ್ಪ ಹೇಮನಿ ಪೂಜಾರ ಸಾ॥ ಸಂಶಿ ,,
ಕರಿಯಪ್ಪ ಪೂಜಾರ ಕಟ್ಟಿಮನಿ ,, ,,
ಬಸಪ್ಪ ವ ಯಲ್ಲಪ್ಪ ಒಣ್ಣಕ್ಕನವರ ಸಾ॥ ಕುಂದಗೋಳ
ರಾಚಪ್ಪ ಲಕ್ಷ್ಮಣ್ಣನವರ ,,
ವೀರಪ್ಪ ಪೂಜಾರ ಕಟ್ಟಿಮನಿ ,,
ಹೊಳೆಯಪ್ಪ ನಾಯಕರ ,,
ರಾಯಪ್ಪ ಒಟವಡೆ ,,
ಬಸವಣ್ಣೆಪ್ಪ ಕನ್ನೋಜನವರ ,,
ನಿಂಗಪ್ಪ ಫಕೀರಪ್ಪ ಮಾದಕ್ಕನವರ(ಕಟ್ಟಿಮನಿ),,
ತಿಳ್ಳೆಪ್ಪ ಕರಿಯಪ್ಪ ಗುಡಗೇರಿ ಸಾ॥ ಬಂಕಾಪೂರ

ಮೇಲೆ ಕಾಣಿಸಿದ ಮಹನೀಯರು ನನಗೆ ಪ್ರೋತ್ಸಾಹ ಕೊಟ್ಟು ನನ್ನಿಂದ ಸೇವೆಯನ್ನು ತಕ್ಕೊಂಡಿದ್ದಕ್ಕಾಗಿ ಇವರೆಲ್ಲರ ಅಭಾರವನ್ನು ಮನ್ನಿಸುವೆನು.